ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೦ ಮೇ ೨೦೦೪ ಸಂಚಿಕೆ : ೫

## ಪರಮಪೂಜ್ಯ ಶ್ರೀ ಶ್ರೀಗಳವರ ೯೭ನೆಯ ಶ್ರೀ ಗುರುವಂದನ ಮಹೋತ್ಸವ




ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಕೇಂದ್ರ, ಕಾನೂನು ಮತ್ತು ವಾಣಿಜ್ಯ ಸಚಿವ ಶ್ರೀ ಅರುಣ್ ಜೈಟ್ಲಿ ಅವರು ೯೭ ಜ್ಯೋತಿಗಳನ್ನು ಬೆಳಗಿಸುವುದರ ಮೂಲಕ ಶ್ರೀ ಗುರುವಂದನ ಮಹೋತ್ಸವವನ್ನು ಉದ್ಘಾಟಿಸಿದರು. ವೇದಿಕೆಯಲ್ಲಿ : ಸುತ್ತೂರು ಜಗದ್ಗುರುಗಳು, ಶ್ರೀ ಷಣ್ಮುಖ ಶಿವಯೋಗಿ ಸಂಸ್ಥಾನಮಠದ ಶ್ರೀ ಶ್ರೀಗಳು, ಶ್ರೀ ಜಾರ್ಜ್ ಫರ್ನಾಂಡಿಸ್, ಶ್ರೀ ಅನಂತಕುಮಾರ್, ಶ್ರೀ ಎಂ.ವಿ. ರಾಜಶೇಖರನ್, ಶ್ರೀ ಬಿ.ಎಸ್. ಯಡಿಯೂರಪ್ಪ, ಶ್ರೀ ಎಸ್. ಶಿವಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

## ಸನ್ಮಾನಿತರು



ಡಾ. ಎಸ್.ಜೆ. ನಾಗಲೋಟಿಮಠ



ಡಾ. ಹೆಚ್.ಎಲ್. ನಾಗೇಗೌಡ



ಪ್ರೊ. ಎನ್. ಬಸವಾರಾಧ್ಯ



ಶ್ರೀ ಎನ್.ಆರ್. ಜಗದೀಶ್



ಮುಖಪುಟ
ಪರಮಪೂಜ್ಯ ಶ್ರೀ ಶ್ರೀಗಳವರ
೯೭ನೆಯ ಶ್ರೀ ಗುರುವಂದನ
ಮಹೋತ್ಸವ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಸೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೦ ಮೇ ೨೦೦೪ ಸಂಚಿಕೆ : ೫

## ಒಳಪುಟಗಳಲ್ಲಿ..........

೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ– ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ಜನಮನದಲ್ಲಿ ಹಚ್ಚಹಸಿರಾಗಿಸಿದ ಶ್ರೀ ಗುರುವಂದನ ಮಹೋತ್ಸವ
– ಎಚ್.ಎಸ್. ಸಿದ್ಧಗಂಗಪ್ಪ
೨೨. ವಚನಗಳ ವಿಶ್ಲೇಷಣೆ – ಸಂ. ಡಾ. ಎಲ್. ಬಸವರಾಜು
೨೩. ಪಾಶ್ಚಿಮಾತ್ಯ ವಿದ್ವಾಂಸರ ದೃಷ್ಟಿಯಲ್ಲಿ ಬಸವಣ್ಣನವರು
– ಡಾ. ಎಸ್.ಆರ್. ಗುಂಜಾಳ
೨೮. ಸಾಮಾಜಿಕ ಕಾರ್ಯಕರ್ತ ಶ್ರೀ ಸಿರಿಗಿರೆ ಬಸವರಾಜ
– ಪ್ರೊ. ಮಾಣಿಕರಾವ ಬಿರಾದಾರ
೨೪. ಸಭೆ-ಸಮಾರಂಭ
೨೯. ಕ್ಷೇತ್ರವಾರ್ತೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ.೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೨೩೬೦೪೦೮೭

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೬೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



## ಬಣ್ಣ ಬದಲಾಯಿಸುವವರು ....

'ಆಚಾರವನರಿಯಿರಿ ವಿಚಾರವನರಿಯಿರಿ' ಎನ್ನುತ್ತಾರೆ ಬಸವಣ್ಣನವರು. ಚುನಾವಣೆಗಳು ಮುಗಿದಿವೆ. ಚುನಾವಣಾ ಪ್ರಣಾಳಿಕೆಗಳನ್ನು ಎಲ್ಲ ಪಕ್ಷಗಳವರೂ ಘೋಷಿಸಿದ್ದಾರೆ. ದಿನಾಂಕ ೧೬..೫.೨೦೦೮ರಂದು ಫಲಿತಾಂಶ ಪ್ರಕಟವಾಗುತ್ತದೆ. ವಿಜಯಿಗಳು ಯಾರೆಂಬುದು ತಿಳಿದು ಬರುತ್ತದೆ. ಅನಂತರ ಮತ್ತೊಂದು ಸುತ್ತು ಕಸರತ್ತು ನಡೆಯುತ್ತದೆ. ಅಧಿಕಾರ ಗದ್ದುಗೆಯೇರಲು ಹೊಸ ಹೊಸ 'ಪಟ್ಟು'ಗಳು 'ವರಸೆ'ಗಳು ಒಳಗೊಳಗೇ ನಡೆಯುತ್ತವೆ. ಅಪ್ಪಟ ಆಚಾರಶೀಲರು ಯಾವ ಪಕ್ಷದಲ್ಲಿಯೂ ಕಾಣಬರರು. ಎಷ್ಟೆಷ್ಟು ಸಾಧ್ಯವೋ ಅಷ್ಟಷ್ಟು ಆಚಾರದ ಅಂಚನ್ನು ದಾಟಲು ಯಾರೂ ಹಿಂಜರಿಯಲಾರರು. ಕುರ್ಚಿಯ ಆಕರ್ಷಣೆ ವಿಚಾರವಂತಿಕೆಗೆ ಗ್ರಹಣ ಹಿಡಿದಂತಾಗುತ್ತದೆ. ಆಚಾರವೆಂಬುದು ಆತ್ಮಸಂಬಂಧಿಯಾದುದೆಂಬುದನ್ನು ಚಿಂತಿಸುವ 'ಮನಸ್ಸು'ಗಳು ಎಲ್ಲಿವೆ? ಎಂದು ವಿಚಾರ ಮುಂದಾಗುವುದಕ್ಕೆ ಬದಲು 'ಜಾಣ ನಟನೆ'ಗೆ ಸಿದ್ಧವಾಗುತ್ತವೆ. ನಮ್ಮ ರಾಷ್ಟ್ರದ ಅಮೂಲ್ಯ ಸಂಪತ್ತಾದ 'ಶೀಲ'ವನ್ನೇ 'ಆಚಾರಸಮನ್ವಿತವಾದ ವಿಚಾರ'ವನ್ನೇ ತೃಣಸಮ ಮಾಡುವ ರಾಜಕೀಯ ಷಡ್ಯಂತ್ರಗಳು ವಿಜೃಂಭಿಸುತ್ತವೆ. ಅಧಿಕಾರದಾಹದಿಂದ ಆತ್ಮವನ್ನೇ ವಂಚಿಸುವ 'ಆಟ'ಗಳು ಹಗಲಿರುಳು ನಡೆಯುತ್ತವೆ. 'ಬಾಯಿದ್ದವ ಬರದಲ್ಲಿ ಬದುಕಿದ' ಎಂಬ ಗಾದೆಯೊಂದೆದೆ. ಗೆಲ್ಲುವ ಮುನ್ನ ಆಡಿದ ಮಾತುಗಳು ಮರೆತು ಹೋಗುತ್ತವೆ, ಗೆದ್ದ ಮೇಲಿನ ಮಾತುಗಳು ಬೇರೆಯೇ ಆಗುತ್ತವೆ. 'ಕಾಮರೂಪಿ'ಗಳು ರಾಜಕಾರಣಿಗಳು ಎಂಬ ಪ್ರಾಜ್ಞರ ಮಾತು ನೆನಪಾಗುತ್ತದೆ. ಸಂದರ್ಭಕ್ಕೆ ತಕ್ಕಹಾಗೆ ''ಬಣ್ಣ ಬದಲಾಯಿಸುವ'' ನಟವರ್ಗದವರಿವರು. ಇವರಿಗೆ ಯಾವುದೇ ತತ್ತ್ವನಿಷ್ಠೆ, ಆತ್ಮಪ್ರಜ್ಞೆ, ತಮ್ಮ ಮಾತು, ನಡೆಗಳ ಬಗ್ಗೆ ಗಂಭೀರ ನಿಲವು ಇಲ್ಲ. ಎಲ್ಲ ಅಧಿಕಾರಕ್ಕೆ ಮಾತ್ರ. ಏನೇನು ಬೇಕೋ ಅದನ್ನೆಲ್ಲ ಮಾಡಬಲ್ಲರು. ಇವರ ಆಚಾರ ಭ್ರಷ್ಟಾಚಾರ, ಇವರ ವಿಚಾರ ಸ್ವಹಿತಾಚಾರ. ಆಚಾರದಲ್ಲಿ ಮಾನವೀಯತೆಯ ಜೀವಾಳವಿದೆಯೆಂಬುದನ್ನರಿಯಬೇಕಾದ ಈ ನಾಯಕರೇ ವಿಚಾರವೆಂದರೆ ಸಮಯಕ್ಕೆ ತಕ್ಕ ಬಣ್ಣ ಬದಲಾಯಿಸುವುದೆಂದು ಮಾಡಿತೋರಿಸುತ್ತಿದ್ದಾರೆ. ಬೇಕಾದಾಗ ಬೇಕಾದ ಬಣ್ಣ ! ಬೇಕಾದ ಪಾತ್ರ!! ಬೇಕಾದ ಮಾತು!!! ಕಾಮರೂಪಿಗಳಿವರು. ನುಡಿಗೆ-ನಡೆಗೆ ಗೋಡೆಕಟ್ಟಿ ಅದರ ಮೇಲೇರಿ ಕುಳಿತುಕೊಳ್ಳುವ 'ಕಲೆ'ಯನ್ನರಿತವರಿವರು. ನಡೆ-ನುಡಿ ಒಂದಾದುದೇ ಸಿದ್ಧಾಂತವೆಂಬುದನ್ನು ಎಂದೂ ಒಪ್ಪದ 'ಜನಸೇವಕ'ರಿವರು. ಬೇವನ್ನು ಬಿತ್ತಿ ಮಾವನ್ನು ಬೆಳೆಯುವ ವಿನೂತನ ಕೃಷಿಕರು. ಚುನಾವಣೆಯಲ್ಲಿ ತಾವು ಮಾಡಿದ ಕೋಟಿ ಕೋಟಿಗಳಿಗೆ ಪ್ರತಿಯಾಗಿ 'ಸೇವೆ'ಯ ಹೆಸರಲ್ಲಿ ಎಷ್ಟೆಷ್ಟು ಪಡೆಯಬಹುದೆಂಬ ಲೆಕ್ಕಾಚಾರ ಮಾಡುವ 'ಲೆಕ್ಕಿಗರರಸರು'. ಇವರ ಆಚಾರಕ್ಕೂ ವಿಚಾರಕ್ಕೂ ದೂರವೆಷ್ಟೆಂದರೆ, ಕಾವೇರಿಯಿಂದ ನರ್ಮದೆಗಿಂತಲೂ ಹೆಚ್ಚು. ನಾವೆಲ್ಲ 'ಹರಕೆಯ ಕುರಿ'ಗಳು ಅಷ್ಟೆ. 'ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು' ಎಂಬುದಷ್ಟೇ ಜನಸಮುದಾಯದ ಭವಿಷ್ಯ. ಚುನಾವಣೆಯ ಸಮಯದಲ್ಲಿ ಪ್ರಲೋಭನೆಗಳಿಗೊಳಗಾಗಿ ಆಸೆ, ಆಮಿಷಗಳಿಗೆ ತಮ್ಮನ್ನು ತಾವು ಮಾರಿಕೊಂಡವರಿಗೆ 'ಆಚಾರವನರಿಯಿರಿ ವಿಚಾರವನರಿಯಿರಿ' ಎಂಬ ಬಸವಣ್ಣನವರ ಮಾತುಗಳು ಅರ್ಥವಾಗುವ ಕಾಲ ಇನ್ನೆಷ್ಟು ದೂರವಿದೆಯೋ ಆ ಕೂಡಲಸಂಗಮದೇವರೇ ಹೇಳಬೇಕು.

— ಸಂಪಾದಕ







## ಚುನಾವಣೆ

ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಲ್ಲಿ ಚುನಾವಣೆಯೆಂಬುದು ಒಂದು ಪವಿತ್ರಮಹಣಿಹ. ಪ್ರತಿಯೊಬ್ಬ ಸ್ಪರ್ಧಿಯೂ ತ್ಯಾಗಮನೋಭಾವದಿಂದ ದೇಶಸೇವೆಗಾಗಿ ಕಟಿಬದ್ಧನಾಗುವ ಸಂದರ್ಭ. ದೇಶ ತನಗೆ ನೀಡಿದ ಸುಖ, ಸೌಲಭ್ಯಗಳ ಸದವಕಾಶಗಳ ಋಣತೀರಿಸುವ ಕೃತಜ್ಞತೆಯ ಪ್ರತ್ಯುಪಕಾರ. ಪ್ರತಿ ಪ್ರಜೆಯ ಮುಂದೆ ನಿಂತು ವಿನಮ್ರವಾಗಿ ಸೇವಾವಕಾಶವನ್ನು ಆಶೀರ್ವದಿಸಲು ಪ್ರಾರ್ಥಿಸುವ ಕೈಂಕರ್ಯ. ಸಂವಿಧಾನದತ್ತವಾದ ಹಕ್ಕನ್ನು ತನ್ನದಾಗಿಸಿಕೊಳ್ಳಲು ನಡೆಸುವ ಪ್ರಯತ್ನ. ಅದೊಂದು ದೇವಪೂಜೆ. ದೇಶರೂಪಿಯಾದ ದೇವರಪೂಜೆ. ಪೂಜೆ ಪವಿತ್ರವಾದುದು. ಪಾವಿತ್ರ್ಯತೆಯನ್ನು ಕಳೆದುಕೊಂಡಪೂಜೆ ವ್ಯಾಪಾರವಾಗುತ್ತದೆ. ಕೊನೆಗೆ ಜೂಜಾಗಿ ಪರಿಣಮಿಸುತ್ತದೆ. ತನ್ನತನವನ್ನೇ ಕಳೆದುಕೊಳ್ಳುತ್ತದೆ. ಇಂತಹ ಪೂಜಾಕಾರ್ಯದಲ್ಲಿ ಭಾಗಿಗಳಾಗುವ ಎಲ್ಲರೂ ಪವಿತ್ರ ಮನಸ್ಕರಾಗಬೇಕು, ಪ್ರಾಮಾಣಿಕರಾಗಿರಬೇಕು. ಆದರೆ ಇದೀಗ ನಡೆದ ಚುನಾವಣೆಗಳನ್ನು ಗಮನಿಸಿದಾಗ ತುಂಬಾ ದುಃಖವಾಗುತ್ತದೆ. ನೈತಿಕತೆಯ ಹರಾಜು ನಡೆದಿರುವುದನ್ನು ಕಂಡು ದೇಶದ ಸ್ಥಿತಿ ಎಲ್ಲಿಗೆ ಹೋಗುತ್ತದೆ ಎಂಬ ಆತಂಕವುಂಟಾಗುತ್ತಿದೆ. ಸ್ವಾತಂತ್ರ್ಯ ಬಂದ ಮೊದಲ ದಿನಗಳಲ್ಲಿ ನಡೆದ ಚುನಾವಣೆಗಳಿಗೂ ಇಂದು ನಡೆಯುತ್ತಿರುವ ಚುನಾವಣೆಗಳಿಗೂ ಎಂಥ ದುರ್ದಸೆ ಪ್ರಾಪ್ತವಾಯಿತೆನಿಸುತ್ತದೆ. ಅಂದು ಚುನಾವಣೆಗೆ ಸ್ಪರ್ಧಿಸುತ್ತಿದ್ದ ಅಭ್ಯರ್ಥಿಗಳಲ್ಲಿ ಆದರ್ಶಗುಣಗಳಿದ್ದವು, ಉದಾತ್ತ ಮೌಲ್ಯಗಳಿದ್ದವು. ಸೇವೆಯೇ ಜೀವನದ ಪರಮಧ್ಯೇಯವಾಗಿತ್ತು. ಸರ್ದಾರ್ ವಲ್ಲಭಬಾಯಿ ಪಟೇಲ್, ಲಾಲ್‌ಬಹದ್ದೂರ್‌ಶಾಸ್ತ್ರಿ, ನಿಜಲಿಂಗಪ್ಪನವರಂಥ ಶ್ರೇಷ್ಠವ್ಯಕ್ತಿಗಳು ಕಾಣಬರುತ್ತಿದ್ದರು. ಇಂದು ಎಲ್ಲ ಅಪಮಾರ್ಗಗಳಿಂದ ಜಯಗಳಿಸಬೇಕೆಂಬ ಸ್ವಾರ್ಥಸಾಧಕರು ಕಂಡುಬರುತ್ತಿದ್ದಾರೆ. ಅಧಿಕಾರದಾಹ ವಿಜೃಂಭಿಸಿದೆ. ಹೇಗಾದರೂ ಮಾಡಿ ಗೆಲ್ಲುವುದೊಂದೇ ಗುರಿಯಾಗಿದೆ. ತಮ್ಮ ಗೆಲುವಿಗಾಗಿ ಅನುಸರಿಸುತ್ತಿರುವ ತಂತ್ರ, ಕುತಂತ್ರಗಳು ರಾಷ್ಟ್ರದ ಶತ್ರುಗಳು ಎಂಬುದನ್ನು ಅರಿಯದವರಾಗಿದ್ದಾರೆ. ಆಶೆ, ಆಮಿಷಗಳ ಮೂಲಕ ಪ್ರಜೆಗಳನ್ನು ತನ್ಮೂಲಕ ರಾಷ್ಟ್ರವನ್ನು ಅವಮಾನಿಸುತ್ತಿದ್ದೇವೆ ಎಂಬ ಅರಿವಿಲ್ಲದವರಾಗಿದ್ದಾರೆ. ಮತದಾನ ಮಾಡುವ ಪ್ರಜೆಯೂ ನಿಷ್ಕಲ್ಮಷನಾಗಿರಲು ಸ್ಥಿರಮನಸ್ಕನಾಗುತ್ತಿಲ್ಲದಿರುವ ದುರಂತ ಎದುರಾಗುತ್ತಿದೆ. ತನ್ನನ್ನು ಕೇವಲ 'ಕ್ಷುಲಕ'ಗಳಿಗೆ ಮಾರಿಕೊಳ್ಳುವ ಹಂತ ತಲುಪಿರುವುದು ರಾಷ್ಟ್ರದ ಭವಿತವ್ಯಕ್ಕೆ ರಾಹುಗ್ರಸ್ತವಾಗುವಂತೆ ಕಾಣುತ್ತದೆ.

ಇನ್ನು, ಚುನಾವಣೆಗಳು ಮುಗಿದಿವೆ. ಸರ್ಕಾರದ ರಚನೆ. ಅದಕ್ಕಾಗಿ ತತ್ತ್ವಗಳಿಗೆ ತಿಲಾಂಜಲಿ. ಅಪವಿತ್ರಮೈತ್ರಿ. ಅಧಿಕಾರಕ್ಕಾಗಿ-ಹಗ್ಗ ಜಗ್ಗಾಟ. ಇಲ್ಲಿಯೂ ಪ್ರಲೋಭನೆಗಳ ಪ್ರವರ್ಧನ; ಗುಪ್ತ ಪ್ರದರ್ಶನ ಜಾತಿ, ಪ್ರದೇಶ, ಬಲಾಬಲಗಳ ಮೇಲಾಟ. ದೇಶಕ್ಕಾಗಿ ನಾವು ಎಂಬುದಲ್ಲ ನಮಗಾಗಿ ದೇಶ ಎಂಬುದೇ ಇಂದಿನ ಮಂತ್ರ.

*

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

*ನೆಲನಿಲ್ಲದ ಭೂಮಿಯಲ್ಲಿ ಒಂದು ತಲೆ ಹುಟ್ಟಿತ್ತು*
*ತಲೆ ಹಲವು ಮುಖವಾಗಿದೆ.*
*ಇದರ ನೆಲೆಯಬಲ್ಲ ಹಿರಿಯನಾರನೂ ಕಾಣೆನು*
*ಹಲವು ಮುಖ ಹಾವಾಡಿಗನ ನುಂಗಲು*
*ನೆಲನೆತ್ತ ಹೋಯಿತ್ತೆಂದರಿಯೆನಯ್ಯಾ*
*ಹಾವಾಡಿಗದೇವಾಡಿಗನೊಳಡಗಲು*
*ಹಾವೆತ್ತ ಹೋದವೋ ದೇವಾ?*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !*

ಪೃಥ್ವಿನಾಶವಾಗಿ ಚಿತ್ಪೃಥ್ವಿಯೆ ಅಂಗವಾಗಿರುವ ಶರಣನಲ್ಲಿ ಸುಜ್ಞಾನವೆಂಬ ಶಿರಸ್ಸು ಅಂಕುರಿಸಿತು. ಆ ಶಿರವೆ ಪ್ರಧಾನವಾದ ಜ್ಞಾನಲಿಂಗವೆ ಸರ್ವಾಂಗಲಿಂಗವಾಗಿರುವ ಭೇದವನ್ನು ತಿಳಿಯುವುದಕ್ಕೆ ದ್ವೈತ, ಅದ್ವೈತ, ಹಠ, ಕರ್ಮಿಗಳಿಗೆ ಅಸಾಧ್ಯ. ಸರ್ವಾಚಾರ ಸಂಪತ್ಸ್ವರೂಪದ ಪರಶಿವ ಲಿಂಗವು ಚಿನ್ಮಂತ್ರ ಸಂಬಂಧವನ್ನುಳ್ಳ ಶರಣನು ಅಪ್ಪಿಕೊಂಡಿರಲು ದೇಹಭಾವವು ನಿವೃತ್ತಿಯಾಯಿತು. ಆ ಶರಣನು ಪರಶಿವಲಿಂಗದಲ್ಲೇಕಾರ್ಥನಾಗಿರಲು ಮನಸ್ಸು ಮೊದಲಾದ ಅಂತಃಕರಣಗಳು ಲಿಂಗದಲ್ಲಿ ತರಹರವಾದವು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

### ಶ್ರೀವಾಣಿ

ಕ್ರಮಬದ್ಧ ಜೀವನ ಪ್ರಗತಿಯ ಮೂಲ, ಅಕ್ರಮ ಜೀವನ ವಿನಾಶಕ್ಕೆ ಹಾದಿ. ಆದ್ದರಿಂದ ಎಲ್ಲಾ ವ್ಯವಹಾರ ಕ್ರಮದಿಂದ ಸಾಗುವ ವ್ಯವಸ್ಥೆಯಾದಾಗ ಜೀವನದಲ್ಲಿ ಸುಖ, ಶಾಂತಿ. ಹಾಗೆ ಮಾಡಲು ವ್ಯಕ್ತಿಯ ಪ್ರಯತ್ನ ಬಹಳ ಮುಖ್ಯ.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಅಂಗೈಯ ಲಿಂಗವನೆ ಗಂಗೆಯ ಮುಡಿಮಾಡಿ
ಈ ಜಗದ ಸೇವೆಗೆ ನಿಲಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಸುಂದರ ಗುರುವೆ ಮಾನಸುಂದರ ಪ್ರಭುವೆ
ವೀರವೈರಾಗ್ಯದ ಸುಂದರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿ ಶೃಂಗಾರವೆ ಮುಕ್ತಿ ಶೃಂಗಾರವೆ
ಶೃಂಗಾರ ದಾಸೋಹ ಶೃಂಗವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನು ಮುನಿ ಯತಿವ್ರತಿ ನೀವೆ ಆಗಿಹಿರಯ್ಯಾ
ಲೋಕ ಲೋಕಗಳೆಲ್ಲ ನಿಮ್ಮೊಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿಕಲಿತೆ ನಿಮ್ಮಿಂದ ನಡೆ ಕಲಿತೆ ನಿಮ್ಮಿಂದ
ಕಲಿತೆ ನಿಮ್ಮಿಂದ ಜಗದರಿವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಕರಸ್ಥಲದ ಜ್ಯೋತಿಯ ಬೆಳಕಿನಲಿ
ಮಾಯದ ಮದಮುರಿದ ಮೋಹನಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನವಮಗ್ನಮಾಡಿ ಘನಲಿಂಗದನುವಿಗೆ
ತನುಮಗ್ನಗೊಳಿಸಿದೆ ಜಗದ್ಹಿತಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂಗ ಲಿಂಗ ತ್ರಯವ ಸಂಗಿಸಿದೆ ಶರಣರೊಳು
ಕಂಗಳಿಗೆ ಕಲ್ಯಾಣ ತೋರಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕುಲಸೀಮೆಗೆದ್ದಿರುವ ಚೆಲುವ ಚೆನ್ನಿಗಲಿಂಗ
ನೆಲ ಜಲವ ಮಡಿಗೈದ ಚರಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತಿನ ಗೋಸುಂಬೆ ಜಾತಿಡೊಂಬರ ಕಂಡು
ನಾಚಿದೆ ನರಳಿದೆ ಒಳಗೊಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಜನಮನದಲ್ಲಿ ಹಚ್ಚಹಸಿರಾಗಿಸಿದ ಶ್ರೀ ಗುರುವಂದನ ಮಹೋತ್ಸವ

ವರದಿ : ಎಚ್.ಎಸ್. ಸಿದ್ಧಗಂಗಪ್ಪ
೫೩/೧, ೩ನೇ ಅಡ್ಡರಸ್ತೆ, ವಿಶ್ವೇಶ್ವರಯ್ಯ ರಸ್ತೆ,
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ,
ಬೆಂಗಳೂರು – ೫೬೦ ೦೪೦.



ಸಮಾರಂಭದ ವೇದಿಕೆಗೆ ಮೆರವಣಿಗೆಯಲ್ಲಿ ಪೂಜ್ಯ ಶ್ರೀ ಶ್ರೀಗಳವರನ್ನು ಬರಮಾಡಿಕೊಳ್ಳುತ್ತಿರುವುದು.

**"ಈ** ವೈಭವವನ್ನು ನೋಡಲು ಎರಡು ಕಣ್ಣು ಸಾಲದು, ನುಡಿಗಳನ್ನು ಕೇಳಲು ಎರಡು ಕಿವಿಗಳು ಸಾಲದು, ಇಂತಹ ಅಪೂರ್ವ ಸಮಾರಂಭದಲ್ಲಿ ಭಾಗವಹಿಸುತ್ತಿರುವುದು ನನ್ನ ಪೂರ್ವಜನ್ಮದ ಪುಣ್ಯ'' ಎಂದು ಹೇಳಿದವರು ಚಾಮರಾಜನಗರದ ಎಂಭತ್ತರ ಹರೆಯದ ಶ್ರೀ ಮಾದಪ್ಪನವರು. ಅವರನ್ನು 'ಸಿದ್ಧಗಂಗಾ' ಪತ್ರಿಕೆಯು ಮಾತನಾಡಿಸಿದಾಗ ಅವರ ಬಾಯಿಂದ ಹೊರಬಿದ್ದ ಉದ್ಗಾರದ ನುಡಿಗಳು.

ಏಪ್ರಿಲ್ ೪ರಂದು ಶ್ರೀಮಠದಲ್ಲಿ ಏರ್ಪಡಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರ ೯೭ನೇ ಜನ್ಮದಿನೋತ್ಸವ-ಗುರುವಂದನ ಸಮಾರಂಭದಲ್ಲಿ ಭಾಗವಹಿಸಲು ತಮ್ಮ ಅನಾರೋಗ್ಯವನ್ನು ಲೆಕ್ಕಿಸದೆ ಬಂದಿದ್ದರು. ಪೂಜ್ಯ ಶ್ರೀಗಳವರ ದರ್ಶನ ಮಾಡಿದ ಅವರ ಮುಖದಲ್ಲಿ ಧನ್ಯತೆಯ ಭಾವನೆ ವ್ಯಕ್ತವಾಗುತ್ತಿತ್ತು. ಅವರ ಒಂದೊಂದು ನುಡಿಗಳು ಅಕ್ಷರಶಃ ನಿಜವೆನಿಸಿತ್ತು. ಶ್ರೀ ಮಾದಪ್ಪ ನವರು ಲಕ್ಷಾಂತರ ಜನ ಭಕ್ತರ ಪ್ರತಿನಿಧಿಗಳಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು.

**ಗು**ಲ್ಬರ್ಗಾ ಜಿಲ್ಲೆಯಿಂದ ಅರವತ್ತರ ಶ್ರೀ ಶರಣಪ್ಪ ಅವರು ''ಇಂಥ ಸಮಾರಂಭದಲ್ಲಿ ಭಾಗವಹಿಸಬೇಕಾದರೆ ಪುಣ್ಯ ಮಾಡಿರಬೇಕು. ಎತ್ತ ನೋಡಿದರೂ ಜನರೇ ಕಾಣುತ್ತಿದ್ದಾರೆ. ಅಪ್ಪಾರವರ ದರ್ಶನ ಮಾಡಲು ಅನೇಕ ವರ್ಷಗಳಿಂದ ಪ್ರಯತ್ನಿಸುತ್ತಿದ್ದೆ. ಈ ಸಲ



ಭಾಗವಹಿಸುವ ಭಾಗ್ಯ ನನ್ನದಾಯಿತು'' ಎಂದು ಹೇಳುವಾಗ ಅವರ ಕಣ್ಣುಗಳು ಹೊಳೆಯುತ್ತಿದ್ದವು. ''ಲಕ್ಷಾಂತರ ಜನರಿಗೆ ದಾಸೋಹ ವ್ಯವಸ್ಥೆ ಮಾಡುತ್ತಿರುವುದು ನಿಜಕ್ಕೂ ಅದ್ಭುತ, ಪವಾಡ'' ಎಂದು ಆಶ್ಚರ್ಯವನ್ನು ವ್ಯಕ್ತಪಡಿಸಿದರು.

**ಈ** ಅಪೂರ್ವ ಸಮಾರಂಭದಲ್ಲಿ ಭಾಗವಹಿಸಲು ನಾಡಿನ ಮೂಲೆ ಮೂಲೆಗಳಿಂದಲ್ಲದೆ, ನೆರೆ ರಾಜ್ಯಗಳಾದ ಆಂಧ್ರ, ಮಹಾರಾಷ್ಟ್ರ, ತಮಿಳುನಾಡಿನಿಂದಲೂ ಅಪಾರ ಸಂಖ್ಯೆಯ ಭಕ್ತರು, ಅಭಿಮಾನಿಗಳು ಆಗಮಿಸಿದ್ದರು.

ಪರಮಪೂಜ್ಯ ಶ್ರೀ ಶ್ರೀಗಳವರನ್ನು ಶ್ರೀಮಠದಿಂದ ವೇದಿಕೆಗೆ ಕಳಸ ಹೊತ್ತ ಸುಮಂಗಲಿಯರು, ಜನಪದ ಕಲಾವಿದ ಶ್ರೀ ಎಚ್.ಎನ್. ನೀಲಕಂಠಯ್ಯ ಮತ್ತು ಅವರ ಸಂಗಡಿಗರಿಂದ ವೀರಭದ್ರನ ನೃತ್ಯ, ನಂದಿಧ್ವಜ ಮುಂತಾದವುಗಳೊಂದಿಗೆ ಮೆರವಣಿಗೆಯಲ್ಲಿ ಕರೆತರಲಾಯಿತು. ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಸುತ್ತೂರು ಜಗದ್ಗುರುಗಳು, ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಕೇಂದ್ರ ಕಾನೂನು ಸಚಿವರಾದ ಶ್ರೀ ಅರುಣ್ ಜೈಟ್ಲಿ ಕೇಂದ್ರ ಮಾಜಿ ಸಚಿವರಾದ ಶ್ರೀ ಅನಂತಕುಮಾರ್, ಕರ್ನಾಟಕ ಬಿ.ಜೆ.ಪಿ. ಮುಖಂಡ ಶ್ರೀ ಬಿ.ಎಸ್. ಯಡಿಯೂರಪ್ಪ, ಮಾಜಿ ಶಾಸಕ ಶ್ರೀ ಶಿವಣ್ಣ ಮೊದಲಾದ ಗಣ್ಯರು ಇದ್ದರು.

ಪರಮಪೂಜ್ಯ ಶ್ರೀ ಶ್ರೀಗಳವರು ವೇದಿಕೆಗೆ ಆಗಮಿಸುತ್ತಿದ್ದಂತೆ ಕಿಕ್ಕಿರಿದು ತುಂಬಿದ್ದ ಸಭಾಂಗಣ ಮೌನವಾಯಿತು. ವಿದ್ಯುತ್ ಸಂಚಾರವಾದಂತೆ ಎಲ್ಲರೂ ಎದ್ದುನಿಂತು ಭಕ್ತಿನಮನಗಳನ್ನು ನಿಂತಲ್ಲಿಯೇ ಸಲ್ಲಿಸಿದರು. ಅದೊಂದು ಅಪೂರ್ವದೃಶ್ಯ!

### ಉದ್ಘಾಟನೆ

ಶ್ರೀ ಗುರುವಂದನ ಸಮಾರಂಭವನ್ನು ೯೭ ಜ್ಯೋತಿಗಳನ್ನು ಸಾಂಕೇತಿಕವಾಗಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದ ಕೇಂದ್ರ ಕಾನೂನು ಸಚಿವರಾದ ಶ್ರೀ ಅರುಣ್ ಜೈಟ್ಲಿ ಅವರು ''ಇದೊಂದು ಚಿರಸ್ಮರಣೀಯ ದಿನ. ಪೂಜ್ಯ ಶ್ರೀ ಶ್ರೀಗಳವರ ಹುಟ್ಟುಹಬ್ಬದಲ್ಲಿ ಪಾಲ್ಗೊಳ್ಳುವುದೇ ನನ್ನ ಪುಣ್ಯ. ಜೀವನದಲ್ಲಿ ಒದಗಿದ ದೊಡ್ಡ ಭಾಗ್ಯ. ಪೂಜ್ಯ ಶ್ರೀ ಶ್ರೀಗಳವರ ಜೀವನ ನನಗೆ ಒಂದು ದೊಡ್ಡ ಶಿಕ್ಷಣವಾಗಿದೆ. ಅವರು ತಮ್ಮ ಆಧ್ಯಾತ್ಮಿಕ ಜೀವನದ ಮೂಲಕ ಕೋಟ್ಯಾಂತರ ಜನಕ್ಕೆ ಆಧ್ಯಾತ್ಮ ಮತ್ತು ತತ್ವಜ್ಞಾನದ ಬೆಳಕಾಗಿದ್ದಾರೆ. ಶ್ರೀಗಳವರು ಈ ರಾಷ್ಟ್ರದ ಸಂಸ್ಕೃತಿಯ ಪ್ರತೀಕ. ಗ್ರಾಮೀಣ ಪ್ರದೇಶದ ಬಡಮಕ್ಕಳಿಗೆ ಅನ್ನ, ವಿದ್ಯೆ ಜೊತೆಗೆ ಆಧ್ಯಾತ್ಮಿಕ ಮೌಲ್ಯಗಳನ್ನು ಕಲಿಸಿಕೊಡುತ್ತಿರುವ ಶ್ರೀಗಳವರ ಆದರ್ಶ ಎಲ್ಲರಿಗೂ ದಾರಿದೀಪ'' ಎಂದು ತಿಳಿಸಿದರು.




ಶ್ರೀ ಟಿ.ಕೆ. ನಂಜುಂಡಪ್ಪನವರಿಂದ ಸ್ವಾಗತ







ಶ್ರೀ ಅರುಣ್ ಜೈಟ್ಲಿ ಅವರಿಂದ ಉದ್ಘಾಟನಾ ಭಾಷಣ

''**ಪೂಜ್ಯ** ಸ್ವಾಮೀಜಿ ಅವರ ಜೀವನ ಈ ದೇಶವನ್ನು, ಈ ನಾಡಿನ ಅಂತಃಸತ್ವವನ್ನು ಪ್ರತಿನಿಧಿಸುತ್ತದೆ. ಶ್ರೀ ಶ್ರೀಗಳವರು ಮಾಡುತ್ತಿರುವ ಶಿಕ್ಷಣ ಮತ್ತು ಆಧ್ಯಾತ್ಮಿಕ ಸೇವೆ ಒಂದು ಉತ್ತಮ ಸರ್ಕಾರ ಮಾಡದಷ್ಟು ಕೆಲಸವನ್ನು ಒಬ್ಬರೇ ಮಾಡುತ್ತಿದ್ದಾರೆ. ಇವತ್ತು ದೇಶದಲ್ಲೇ ಅತ್ಯುತ್ತಮ ಶಿಕ್ಷಣವನ್ನು ಸ್ವಾಮೀಜಿ ಅವರು ಕೊಡುಗೆಯಾಗಿ ನೀಡಿದ್ದಾರೆ. ಯಾರು ಬಡತನದಿಂದ ಹಸಿವಿನಿಂದ ನರಳುತ್ತಿದ್ದಾರೋ ಅವರ ಸೇವೆಯನ್ನು ಪೂಜ್ಯ ಶ್ರೀಗಳವರು ಮಾಡುತ್ತಿದ್ದಾರೆ. ಅದು ನಿಜವಾದ ದೊಡ್ಡ ಸೇವೆ. ಇವತ್ತು ನಮ್ಮ ದೇಶಕ್ಕೆ ಶಿಕ್ಷಣ ಮತ್ತು ಮಾನವ ಸಂಪನ್ಮೂಲ ತುಂಬಾ ಮುಖ್ಯವಾದುದು. ಶ್ರೀಮಠದ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿದವರು ವ್ಯಕ್ತಿತ್ವವನ್ನು ಅರಳಿಸಿಕೊಂಡು ಹೊರಬರುತ್ತಿರುವುದು ಅಭಿಮಾನದ ಸಂಗತಿ. ಇಡೀ ಜಗತ್ತಿನಲ್ಲೇ ಅತ್ಯುತ್ತಮವಾದ ಶಿಕ್ಷಣ ಸಂಸ್ಥೆಯನ್ನು ಶ್ರೀ ಸಿದ್ಧಗಂಗಾ ಮಠದಲ್ಲಿ ಕಟ್ಟಲಾಗಿದೆ. ಇಲ್ಲಿನ ಶಿಕ್ಷಣ ಸಂಸ್ಥೆಯಿಂದ ಶಿಕ್ಷಣವನ್ನು ಪಡೆದು ಹೊರಬಂದವರು ಒಂದು ಸುಂದರ ಸಮಾಜವನ್ನು ನಿರ್ಮಾಣ ಮಾಡುವ ಶಕ್ತಿಯನ್ನು ಪಡೆಯುತ್ತಾರೆ'' ಎಂದು ಅಭಿಮಾನದಿಂದ ನುಡಿದರು.

''ಪರಮಪೂಜ್ಯ ಶ್ರೀಗಳವರು ಈ ಇಳಿವಯಸ್ಸಿನಲ್ಲೂ ನಮ್ಮೆಲ್ಲರಿಗೂ ನಾಚಿಕೆಯಾಗುವಂತಹ ಕಾರ್ಯವನ್ನು ಮಾಡುತ್ತಿದ್ದಾರೆ. ಗುರುವಂದನ ಪವಿತ್ರ ಸಮಾರಂಭದಲ್ಲಿ ದೇಶದ ಪರವಾಗಿ ಶತ ಶತ ವಂದನೆಗಳನ್ನು ಅರ್ಪಿಸಿ ಸಚಿವರು ಶಿಕ್ಷಣ ಮತ್ತು ಮಾನವ ಸಂಪನ್ಮೂಲ ಅಭಿವೃದ್ಧಿಗೆ ಪೂರಕ ಕಾರ್ಯಚಟುವಟಿಕೆಗಳು ದೇಶದ ಪ್ರಗತಿಗೆ ನಾವು ನೀಡಬಹುದಾದ ದೊಡ್ಡ ಕೊಡುಗೆ. ಶ್ರೇಷ್ಠ ಪರಂಪರೆ ಹಾಗೂ ಮೌಲ್ಯಗಳನ್ನು ಒಳಗೊಂಡ ಭಾರತದ ಮಾನವ ಸಂಪನ್ಮೂಲ ಇಡೀ ವಿಶ್ವದಲ್ಲೇ ಅದ್ವಿತೀಯವಾದದ್ದು. ಇದನ್ನು ಪ್ರಸ್ತುತ ಅಗತ್ಯತೆಗೆ ಅನುಗುಣವಾಗಿ ರೂಪಿಸುವ ಹೊಣೆ ನಮ್ಮ ಮೇಲಿದೆ'' ಎಂದು ಹೇಳಿದರು.

''**ದೇ**ಶದ ಯಾವುದೇ ಉದ್ಯಮ ಅಥವಾ ಸರ್ಕಾರ ಇಂಥ ಸತ್ವಯುತ ಹಾಗೂ ಪರಿಪೂರ್ಣ ಶಿಕ್ಷಣ ನೀಡಲು ಸಾಧ್ಯವಿಲ್ಲ. ಸ್ವಾಮೀಜಿಯವರು ಸಮಾಜದಿಂದ ಪಡೆಯುವ ಗೌರವ ಸ್ಥಾನಮಾನಕ್ಕಿಂತ ಸಾವಿರ ಪಾಲನ್ನು ಸಮಾಜಕ್ಕೆ ನೀಡುತ್ತಿದ್ದು ಹಸಿವು, ಬಡತನದ ಬೇಗೆಯಿಂದ ಸೌಲಭ್ಯವಂಚಿತರ ಕುಟುಂಬಗಳಿಗೆ ಆಶಾಕಿರಣವಾಗಿದ್ದಾರೆ'' ಎಂದು ತಿಳಿಸಿದರು.

''**ಇಡೀ** ಜಗತ್ತಿನಲ್ಲೇ ಅತ್ಯುತ್ತಮ ಶಿಕ್ಷಣ ಸಂಸ್ಥೆಗಳನ್ನು ಹೊಂದಿರುವ ಸಿದ್ಧಗಂಗಾ ಶ್ರೀಗಳು ನೈತಿಕ, ಆಧ್ಯಾತ್ಮಿಕ ಮೌಲ್ಯಗಳನ್ನು ಸಮಾಜಕ್ಕೆ ಬಿತ್ತುವ ಮೂಲಕ ಮಾನವ ಸಂಪನ್ಮೂಲ ವೃದ್ಧಿಗೊಳ್ಳಲು ಪ್ರಮುಖ ಕಾರಣರಾಗಿದ್ದಾರೆ. ತಮ್ಮ ಶಿಕ್ಷಣ ಸಂಸ್ಥೆಗಳ ಮೂಲಕ ಆಧ್ಯಾತ್ಮವನ್ನು ಮತ್ತು ನೈತಿಕತೆಯನ್ನು ಪ್ರತಿಪಾದಿಸುವ ಮೂಲಕ ಸಮಾಜದ ಅಂತಃಸತ್ವವನ್ನು ಹೆಚ್ಚಿಸಿದ್ದಾರೆ.




ಪೂಜ್ಯ ಶ್ರೀಗಳವರಿಂದ ಶ್ರೀ ಅರುಣ್ ಜೈಟ್ಲಿ ಅವರಿಗೆ ಆಶೀರ್ವಾದ



ರಕ್ಷಣಾ ಸಚಿವ ಶ್ರೀ ಜಾರ್ಜ್‌ಫರ್ನಾಂಡೀಸ್ ಅವರಿಂದ ಪ್ರೌಢಶಾಲಾ ನೂತನ ಕಟ್ಟಡದ ಉದ್ಘಾಟನೆ

ದೇಶಕ್ಕೆ ಅಗತ್ಯವಾಗಿರುವ ಮಾನವ ಸಂಪನ್ಮೂಲವನ್ನು ವೃದ್ಧಿಗೊಳಿಸಲು ಮನುಷ್ಯನ ವ್ಯಕ್ತಿತ್ವವನ್ನು ಮತ್ತು ಚಾರಿತ್ರ್ಯವನ್ನು ಉತ್ತಮಗೊಳಿಸುತ್ತಿದ್ದಾರೆ'' ಎಂದು ಶ್ಲಾಘಿಸಿದರು.

ತ್ರಿವಿಧ ದಾಸೋಹ ಮೂರ್ತಿಗಳೂ, ನಮ್ಮೆಲ್ಲರಿಗೂ ಆದರ್ಶವಾಗಿರುವ ಪೂಜ್ಯ ಶ್ರೀಗಳವರು ನೂರ್ಕಾಲ ಬಾಳಲಿ ಎಂದು ಶುಭ ಹಾರೈಸಿದ ಕೇಂದ್ರ ಕಾನೂನು ಸಚಿವರು, ಪ್ರಧಾನಿ ಶ್ರೀ ಅಟಲ್ ಬಿಹಾರಿ ವಾಜಪೇಯಿ ಅವರು ೧೯೯೯ರಲ್ಲಿ ಪ್ರಧಾನಿಯಾದ ಕೂಡಲೇ ಶ್ರೀ ಕ್ಷೇತ್ರಕ್ಕೆ ಭೇಟಿ ನೀಡಿ ಸ್ವಾಮೀಜಿ ಅವರ ಆಶೀರ್ವಾದ ಪಡೆದರು. ಅಂದರೆ ಪ್ರಧಾನಿ ಅವರನ್ನು ಆಕರ್ಷಿಸುವಂತಹ ವ್ಯಕ್ತಿತ್ವ ಹೊಂದಿರುವ ಸ್ವಾಮೀಜಿ ಅವರು ಜೀವನ ಮತ್ತು ಶಿಕ್ಷಣ ಸಂಸ್ಥೆಗಳನ್ನು ನೋಡಿದರೆ ರೋಮಾಂಚನ ಉಂಟಾಗುತ್ತದೆ ಎಂದು ಸಂತೋಷ ವ್ಯಕ್ತಪಡಿಸಿದರು.

ಸಹಸ್ರಮಾನದ ನಾಲ್ಕನೇ ವರ್ಷ, ನಾಲ್ಕನೇ ತಿಂಗಳು ನಾಲ್ಕನೇ ದಿನ ಸ್ವಾಮೀಜಿಯವರು ತಮ್ಮ ವರ್ಧಂತಿ ಆಚರಿಸಿ ಕೊಳ್ಳುತ್ತಿದ್ದಾರೆ. ಸಾವಿರ ವರ್ಷಕ್ಕೊಮ್ಮೆ ಮಾತ್ರ ಇಂಥ ಸುದಿನ ಬರುತ್ತಿದೆ. ಈ ಸಂದರ್ಭದಲ್ಲಿ ಶ್ರೀಮಠದಲ್ಲಿರುವುದು ನನ್ನ ಜೀವನದ ಸೌಭಾಗ್ಯ ಎಂದು ಹರ್ಷ ವ್ಯಕ್ತಪಡಿಸಿದರು.

ಇದೇ ಸಂದರ್ಭದಲ್ಲಿ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಅವರು ವಿದ್ವಾನ್ ಎಂ. ಶಿವಕುಮಾರಸ್ವಾಮಿಯವರ ಸಂಪಾದಕತ್ವದಲ್ಲಿ ಹೊರಬರುತ್ತಿರುವ 'ಮಹಾನಂದಿ' ದಿನ ಪತ್ರಿಕೆಯನ್ನು ಬಿಡುಗಡೆ ಮಾಡಿದರು.

## ಪ್ರೌಢಶಾಲಾ ನೂತನ ಕಟ್ಟಡದ ಉದ್ಘಾಟನೆ

ಪ್ರೌಢಶಾಲಾ ನೂತನ ಕಟ್ಟಡದ ಉದ್ಘಾಟನೆ ಮಾಡಿದ ಕೇಂದ್ರ ರಕ್ಷಣಾ ಸಚಿವರಾದ ಶ್ರೀ ಜಾರ್ಜ್‌ಫರ್ನಾಂಡೀಸ್ ಅವರು ''ಬಸವಣ್ಣನವರ ಆದರ್ಶ-ತತ್ವಗಳನ್ನು ಅನುಷ್ಠಾನಗೊಳಿಸುತ್ತಿರುವ ಪೂಜ್ಯ ಸ್ವಾಮೀಜಿ ಅವರು ಲಕ್ಷಾಂತರ ಜನರನ್ನು ಸುಶಿಕ್ಷಿತರನ್ನಾಗಿ ಮಾಡಿ ಅವರ ಭವಿಷ್ಯವನ್ನು ರೂಪಿಸಿದ್ದಾರೆ. ಇಡೀ ಜೀವನವನ್ನೇ ಸಮಾಜದ ಒಳಿತಿಗಾಗಿ ಮುಡಿಪಾಗಿಟ್ಟಿದ್ದಾರೆ. ಪರಮಪೂಜ್ಯ ಶ್ರೀ ಶ್ರೀಗಳವರ ಪರಿಚಯವಾದಾಗ ನನಗೆ ರಾಮಮೋಹನ ಲೋಹಿಯಾರವರ ವ್ಯಕ್ತಿತ್ವ ಕಣ್ಣೆದುರಿಗೆ ಬಂದಿತು. ಶಿಕ್ಷಣ, ನೈತಿಕ ಶಿಕ್ಷಣ, ಆದರ್ಶಗಳನ್ನು ಸಮಾಜದಲ್ಲಿ ಬಿತ್ತಿ ಬೆಳೆಯುತ್ತಿದ್ದಾರೆ. ನಮ್ಮ ದೇಶದಲ್ಲಿ ಎಷ್ಟೋ ಮಠಗಳಿವೆ, ಸ್ವಾಮಿಗಳಿದ್ದಾರೆ. ಆದರೆ ಅವರಿಗೆಲ್ಲ ಬಸವಣ್ಣನವರ ಜೀವನ ಮೌಲ್ಯಗಳನ್ನು ಅನುಷ್ಠಾನಗೊಳಿಸಲು









ಆಗುವ ತೊಂದರೆಯಾದರೂ ಏನು? ಎಂದು ಪ್ರಶ್ನಿಸಿದ ರಕ್ಷಣಾ ಸಚಿವರು ಬಸವಣ್ಣನವರ ವಚನಗಳಲ್ಲಿ ಅನೇಕ ಸಮಸ್ಯೆಗಳಿಗೆ ಉತ್ತರ ಸಿಗುತ್ತದೆ. ಸ್ವಾಮೀಜಿಯವರ ಇಡೀ ಜೀವನ ದೇಶಸೇವೆ ಮತ್ತು ಸಮಾಜಸೇವೆಗೆ ಮುಡುಪು. ಬಸವಣ್ಣನವರ ಪ್ರತಿ ವಚನಗಳನ್ನು ಕಾರ್ಯರೂಪಕ್ಕೆ ತಂದ ಕಾಯಕಯೋಗಿ ಎಂದು ಮುಕ್ತಕಂಠದಿಂದ ಶ್ಲಾಘಿಸಿದ ಸಚಿವರು ಈ ಸೇವೆಗಾಗಿ ಸ್ವಾಮೀಜಿ ಅವರಿಗೆ ನೊಬೆಲ್ ಪ್ರಶಸ್ತಿ ಬರಬೇಕು'' ಎಂದು ಅಭಿಪ್ರಾಯ ಪಟ್ಟರು.

''ಪ್ರಸ್ತುತ ಸನ್ನಿವೇಶದಲ್ಲಿ ಉತ್ತರ ಭಾರತ ದಲ್ಲಿ ಬಸವಣ್ಣನವರ ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡಬೇಕಾಗಿದೆ. ಅವರ ಸಂದೇಶ ವನ್ನು ಇಡೀ ರಾಷ್ಟ್ರಕ್ಕೆ, ವಿಶ್ವಕ್ಕೆ ಬಿತ್ತರಿಸಬೇಕಾಗಿದೆ'' ಎಂದು ತಿಳಿಸಿದ ಶ್ರೀ ಫರ್ನಾಂಡೀಸ್ ಅವರು ಮಾಜಿಮುಖ್ಯಮಂತ್ರಿ, ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪನವರು ಶ್ರೀಮಠದ ಬಗ್ಗೆ; ಪೂಜ್ಯ ಸ್ವಾಮೀಜಿ ಅವರ ಬಗ್ಗೆ ನೀಡಿದ ಅಭಿಪ್ರಾಯಗಳನ್ನು ಈ ಸಂದರ್ಭದಲ್ಲಿ ಪ್ರಸ್ತಾಪಿಸಿದರು.

''ಬಸವಣ್ಣನವರು ಹಾಗೂ ರಾಮಮೋಹನ್ ಲೋಹಿಯಾ ಅವರ ತತ್ವ ಒಂದೇ ರೀತಿ ಯಾಗಿದ್ದು. ದುರದೃಷ್ಟವೆಂದರೆ ನನಗೆ ಬಸವ ತತ್ವದ ಮಾನವತ್ವ, ದಲಿತ, ಸ್ತ್ರೀ ಸಮಾನತೆ, ಜಾತಿ ವ್ಯವಸ್ಥೆ ನಿರ್ಮೂಲನೆ, ಜನಭಾಷೆಯಲ್ಲಿ ಮಕ್ಕಳಿಗೆ ಶಿಕ್ಷಣ, ಅಂತರ್ಜಾತಿ ವಿವಾಹ ಮತ್ತಿತರ ಹಲವಾರು ಆಯಾಮಗಳಲ್ಲಿ ಬಸವಣ್ಣ ಹಾಗೂ ಲೋಹಿಯಾ ಅವರ ಚಿಂತನೆ ಒಂದೇ ರೀತಿಯದ್ದಾಗಿದೆ'' ಎಂದು ನುಡಿದರು.

''ಇಂದು ದೇಶ ಎದುರಿಸುತ್ತಿರುವ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಬಸವಣ್ಣನವರಲ್ಲಿ, ಬಸವಣ್ಣನವರ ತತ್ವಗಳಲ್ಲಿ ಉತ್ತರವಿದೆ. ಬಸವತತ್ವವು ಮಠಗಳ ಹೊರಗೆ ದೇಶಾದ್ಯಂತ ಪ್ರಚುರವಾಗಬೇಕಿದೆ. ಈ ಮೂಲಕ ದೇಶಕಲ್ಯಾಣ ಸಾಧಿಸಬೇಕು. ಬಸವತತ್ವ ಒಂದು ಪ್ರಾಂತ್ಯ ಅಥವಾ ಭಾಷೆಗೆ ಸೀಮಿತವಾಗದೇ ಇಡೀ ವಿಶ್ವಕ್ಕೆ ವಿಸ್ತಾರವಾಗ ಬೇಕು'' ಎಂದು ಸಲಹೆ ಮಾಡಿದರು.

''ಬಸವಣ್ಣನವರ ಸಾಮಾಜಿಕ ಕ್ರಾಂತಿಯ ಮುಂದುವರೆದ ಭಾಗವಾಗಿ ಸಿದ್ಧಗಂಗಾ ಶ್ರೀಗಳವರು ಶಿಕ್ಷಣ, ದಾಸೋಹ ಮತ್ತು ಸಮಾನತೆಯನ್ನು ಪ್ರತಿಪಾದಿಸುವ ಮೂಲಕ ಈ ಶತಮಾನದ ಪ್ರಥಮ ಹರಿಕಾರರಾಗಿದ್ದಾರೆ'' ಎಂದು ತಿಳಿಸಿದರು.

''ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಂಪರ್ಕ ಪಡೆದು ಕೇವಲ ಆರು ವರ್ಷಗಳು ಕಳೆದವು. ಇದಕ್ಕೂ ಮೊದಲು ನನ್ನ ರಾಜಕೀಯ ಗುರುವಾದ ರಾಮಮನೋಹರ ಲೋಹಿಯಾ ಅವರ ತತ್ವಗಳ ಬಗ್ಗೆ ಆಳವಾಗಿ ತಿಳಿದು ಕೊಂಡಿದ್ದೆ. ಬಸವಣ್ಣ ಮತ್ತು ಲೋಹಿಯಾರ ತತ್ವಗಳು ಸಮಾಜಮುಖಿಯಾಗಿವೆ. ಆದ್ದರಿಂದ ಬಸವಣ್ಣನವರ ವಚನಗಳ ಮೂಲಕ ಭಾರತಕ್ಕೆ




ಶ್ರೀ ಅನಂತಕುಮಾರ್ ಅವರಿಂದ 'ಸಿದ್ಧಗಂಗಾ' ವಿಶೇಷ ಸಂಚಿಕೆ ಬಿಡುಗಡೆ



ಪೂಜ್ಯ ಶ್ರೀಗಳವರಿಂದ ಶ್ರೀ ಅನಂತಕುಮಾರ್ ಅವರಿಗೆ ಆಶೀರ್ವಾದ

ಭವ್ಯ ಭವಿಷ್ಯ ಕಲ್ಪಿಸಿಕೊಡಲು ಇದರಿಂದ ಸಾಧ್ಯವಾಗುತ್ತದೆ. ಬಸವಣ್ಣನವರ ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ತತ್ವಗಳು ಎಲ್ಲಾ ವರ್ಗಗಳ ಹಿತವನ್ನು ಕಾಪಾಡುತ್ತವೆ. ಧಾರ್ಮಿಕ ಕೇಂದ್ರಗಳು ಸಮಾಜವನ್ನು ಉನ್ನತ ಸ್ಥಿತಿಗೆ ತಂದರೆ ರಾಜಕೀಯ ಧರ್ಮ ಅಲ್ಪಕಾಲದ್ದು ಎಂದು ಲೋಹಿಯಾ ಅವರು ತಿಳಿಸಿದ್ದಾರೆ'' ಎಂದು ಶ್ರೀ ಫರ್ನಾಂಡೀಸ್ ತಿಳಿಸಿದರು.

## *ನೊಬೆಲ್ ಪ್ರಶಸ್ತಿ*

'ಜನಸೇವೆಯೇ ಈಶ ಸೇವೆ' ಎಂದು ಸಾರಿದ ಬಸವಣ್ಣನವರ ತತ್ವಗಳನ್ನು ಕಾರ್ಯರೂಪಕ್ಕೆ ತಂದಿರುವ ಮತ್ತು ಬಸವ ವಿಚಾರಧಾರೆಯನ್ನು ಜನ ಸಾಮಾನ್ಯರು ವ್ಯವಹಾರಕ್ಕೆ ತರಲು ವ್ಯವಸ್ಥಿತ ಕಾರ್ಯಕ್ರಮದ ಮೂಲಕ ಅನುಷ್ಠಾನಗೊಳಿಸಿರುವ ಪೂಜ್ಯ ಸ್ವಾಮೀಜಿ ಅವರ ಸೇವೆ ಅನನ್ಯವಾದುದು. ಈ ಹಿನ್ನಲೆಯಲ್ಲಿ ಅವರಿಗೆ ನೋಬೆಲ್ ಪ್ರಶಸ್ತಿ ನೀಡುವಂತೆ ಪ್ರಯತ್ನ ನಡೆಯಬೇಕಿದೆ ಎಂದು ಈ ಸಂದರ್ಭದಲ್ಲಿ ನುಡಿದರು.

''ಕಲ್ಯಾಣಕ್ರಾಂತಿಯ ಹರಿಕಾರ ಜಗಜ್ಯೋಗಿ ಬಸವಣ್ಣನವರ ವಿಚಾರಧಾರೆ ದೇಶದಾದ್ಯಂತ ಅದರಲ್ಲೂ ಉತ್ತರ ಭಾರತದಲ್ಲಿ ಹರಡಬೇಕಾದ ಅಗತ್ಯವಿದೆ'' ಎಂಬುದನ್ನು ಒತ್ತಿ ಹೇಳಿದ ರಕ್ಷಣಾ ಸಚಿವರು ''ಬಸವಣ್ಣನವರ ವಿಚಾರಧಾರೆ ಯನ್ನು ಮಠಗಳಿಂದ ಹೊರತಂದು ನಾನಾ ಭಾಷೆಗಳಲ್ಲಿ ಭಾಷಾಂತರ ಮಾಡಬೇಕಾದ ಅಗತ್ಯವಿದೆ'' ಎಂದು ಸಲಹೆ ಮಾಡಿದರು.

## *ಸಿದ್ಧಗಂಗಾ ವಿಶೇಷ ಸಂಚಿಕೆ ಬಿಡುಗಡೆ*

ಕೇಂದ್ರದ ಮಾಜಿ ಸಚಿವ ಹಾಗೂ ರಾಜ್ಯ ಬಿಜೆಪಿ ಅಧ್ಯಕ್ಷ ಶ್ರೀ ಅನಂತಕುಮಾರ್ ಅವರು 'ಸಿದ್ಧಗಂಗಾ' ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡಿ ''ರಾಜ್ಯದಲ್ಲಿರುವ ವೀರಶೈವ ಮಠಗಳು ಸುಮಾರು ಮೂರುವರೆ ಲಕ್ಷ ಬಡ ವಿದ್ಯಾರ್ಥಿಗಳಿಗೆ ವಿದ್ಯೆ ಮತ್ತು ದಾಸೋಹ ಕಾರ್ಯದಲ್ಲಿ ನಿರತವಾಗಿವೆ. ಬಸವಾದಿ ಪ್ರಮಥರ ಸೇವೆಯನ್ನು ಮುಂದುವರೆಸಿಕೊಂಡು ಹೋಗುತ್ತಿರುವ ಬಸವಣ್ಣನವರ ಅನುಯಾಯಿ ಗಳು ಸಮಾಜಕ್ಕೆ ನೀಡಿರುವ ಕೊಡುಗೆ ಶ್ಲಾಘನೀಯ'' ಎಂದು ನುಡಿದರು.

''ಬಸವಣ್ಣನವರ ಆದರ್ಶಗಳ ಸಮಾಗಮ ಶ್ರೀ ಕ್ಷೇತ್ರದಲ್ಲಿ ನಡೆಯುತ್ತಿದೆ. ಜಗತ್ತಿನ ಮೊದಲನೆ ಸಂಸತ್ತು ಅನುಭವ ಮಂಟಪ. ದೇಶದ ಯಾವ ಸರ್ಕಾರ ಮಾಡದಂತ ಕೆಲಸವನ್ನು ವೀರಶೈವ ಮಠಗಳು ಮಾಡುತ್ತಿವೆ. ನಾಡಿನ ಹಾಗೂ ದೇಶದ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಿಗೆ








ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರಿಂದ ಶಾಲಾಕಟ್ಟಡದ ಶಂಕುಸ್ಥಾಪನೆ

ಮಠದ ಕೊಡುಗೆ ಅಪಾರ. ಪರಮಪೂಜ್ಯರು ಸಮಾಜದ ಒಳಿತಿಗಾಗಿ ತಮ್ಮನ್ನು ಅರ್ಪಿಸಿಕೊಂಡು ಶ್ರೀಗಂಧದಂತೆ ಜೀವನ ನಡೆಸುತ್ತಿದ್ದಾರೆ. ಅವರ ನೂರನೇ ಗುರುವಂದನ ಸಮಾರಂಭವನ್ನು ಅರ್ಥಪೂರ್ಣ ವಾಗಿ ಆಚರಿಸುವ ಭಾಗ್ಯ ನಮ್ಮದಾಗಲಿ'' ಎಂದು ಹಾರೈಸಿದರು.

## *ವಿದ್ಯಾರ್ಥಿನಿಲಯದ ಶಂಖುಸ್ಥಾಪನೆ*

ನೂತನ ವಿದ್ಯಾರ್ಥಿನಿಲಯದ ಶಂಖುಸ್ಥಾಪನೆ ನೆರವೇರಿಸಿದ ಮುಖ್ಯಮಂತ್ರಿ ಸನ್ಮಾನ್ಯ ಶ್ರೀ ಎಸ್.ಎಂ. ಕೃಷ್ಣ ಅವರು ''ಶತಮಾನದ ಹೊಸ್ತಿಲಿನಲ್ಲಿ ನಾಡಿಗೆ ಮಾರ್ಗದರ್ಶನ ನೀಡುತ್ತಿರುವ, ಆಧ್ಯಾತ್ಮಿಕ ಚೇತನವಾಗಿರುವ ಪೂಜ್ಯ ಶ್ರೀ ಶ್ರೀಗಳವರ ಜನ್ಮದಿನೋತ್ಸವ ಸಮಾರಂಭದಲ್ಲಿ ಭಾಗವಹಿಸುತ್ತಿರುವುದು ನನ್ನ ಸುಯೋಗ'' ಎಂದು ತಿಳಿಸಿದರು.

''ತ್ರಿವಿಧ ದಾಸೋಹ ಶ್ರೀ ಸಿದ್ಧಗಂಗಾ ಕ್ಷೇತ್ರದ ಉತ್ಕೃಷ್ಟ ಪರಂಪರೆ, ಬಡಮಕ್ಕಳ ಭವಿಷ್ಯವನ್ನು ಸಮಭಾವದಂತೆ ರೂಪಿಸುತ್ತಾ ಬಂದಿರುವ ಶ್ರೀಗಳವರು ೧೨ನೇ ಶತಮಾನದಲ್ಲಿ ಸಾಧಿಸಿದ ಸಾಮಾಜಿಕ ಕ್ರಾಂತಿಯನ್ನು ಸಮಕಾಲೀನವಾಗಿ ಅನುಷ್ಠಾನಗೊಳಿಸು ತ್ತಿದ್ದಾರೆ. ಈ ಮೌನಕ್ರಾಂತಿಗೆ ನಾವೆಲ್ಲ ಸಾಕ್ಷಿಭೂತರಾಗಿದ್ದೇವೆ. ಪೂಜ್ಯ ಶ್ರೀಗಳವರ ವಯಸ್ಸು ಸಂಪೂರ್ಣವಾಗಿ ವಿಶ್ರಾಂತಿಯನ್ನು ಬೇಡುವಂತಹದು. ಆದರೆ ಪೂಜ್ಯ ಶ್ರೀಗಳು ವಿಶ್ರಾಂತಿಯನ್ನು ತೊರೆದು ಕ್ರಿಯಾಶೀಲರಾಗಿರುವುದಕ್ಕೆ ನಾಡು ಧನ್ಯವಾಗಿದೆ. ನಾವೆಲ್ಲ ಋಣಿಯಾಗಿದ್ದೇವೆ. ಅವರ ದಿವ್ಯದರ್ಶನ ನಮ್ಮೆಲ್ಲರಿಗೂ ನಿರಂತರ ವಾಗಿ ಲಭಿಸಲಿ ಎಂದು ಪ್ರಾರ್ಥಿಸುತ್ತೇನೆ'' ಎಂದು ನುಡಿದರು.

''ಪರಮಪೂಜ್ಯ ಶ್ರೀ ಶ್ರೀಗಳವರು ಸಮಾಜ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡಿರುವ ಅಪ್ರತಿಮ ರಾಷ್ಟ್ರಭಕ್ತರು'' ಎಂದು ತಿಳಿಸಿದ ಶ್ರೀ ಎಸ್.ಎಂ. ಕೃಷ್ಣ ಅವರು ಈ ಸಂದರ್ಭದಲ್ಲಿ ಬಸವಣ್ಣನವರ

*ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ*
*ಹಿಡಿದಿರ್ದ ಲಿಂಗವು ಘಟ ಸರ್ಪನಂತೆ!*
*ನುಡಿಯಲು ಬಾರದು, ನಡೆಯಲು ಬಾರದು*
*ಲಿಂಗದೇವನೆ ದಿವ್ಯವೋ ಅಯ್ಯಾ!*
*ಬಡವನ ಕೋಪ ಅವುಡಿಗೆ ಮೃತ್ಯುವಾದಂತೆ*
*ಕಡೆದಾಂಟದು ಕಾಣಾ ಕೂಡಲಸಂಗಮದೇವಾ.*

''ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ ಇವ ನಮ್ಮವ, ಇವ ನಮ್ಮವ, ಇವ ನಮ್ಮವ ನೆಂದೆನಿಸಯ್ಯಾ ಕೂಡಲ ಸಂಗಮ ದೇವಾ, ನಿಮ್ಮ ಮನೆಯ ಮಗನೆನಿಸಯ್ಯಾ'' ಎಂಬ ವಚನಗಳನ್ನು ಉಲ್ಲೇಖಿಸಿದರು.

''ಎಲ್ಲರನ್ನು ತಮ್ಮವರೆಂದು ತಿಳಿದು ಎಲ್ಲರ ಹಿತವನ್ನು ಬಯಸುತ್ತಿರುವ ಪೂಜ್ಯ ಶ್ರೀಗಳವರು ಒಂದು ಮೌಲ್ಯವನ್ನು ತಂದುಕೊಟ್ಟಿದ್ದಾರೆ. ಸೇವಾ ದೃಷ್ಟಿಯಿಂದ ಸಿದ್ಧಗಂಗಾ ಕ್ಷೇತ್ರಕ್ಕೆ ಸಾಟಿಯಾಗುವ ಮಠಗಳು ತೀರ ಕಡಿಮೆ'' ಎಂದು ಅಭಿಪ್ರಾಯಪಟ್ಟರು.

ಎಂಟು ಸಾವಿರ ವಿದ್ಯಾರ್ಥಿಗಳಿಗೆ ವಸತಿ, ಶಿಕ್ಷಣ ಆಧ್ಯಾತ್ಮಿಕ ಮೌಲ್ಯಗಳನ್ನು ನೀಡುತ್ತಿರುವ ಶ್ರೀಮಠ ಪ್ರತಿನಿತ್ಯ ಸಾವಿರಾರು ಜನರಿಗೆ ದಾಸೋಹವನ್ನು ನಡೆಸಿಕೊಂಡು ಬರುತ್ತಿರುವುದು ಆಧುನಿಕ ಜಗತ್ತಿನ ಅದ್ಭುತ ಎಂದು ಬಣ್ಣಿಸಿದರು.

ಒಂದು ಕಾಲದಲ್ಲಿ ಕೆಲವು ವರ್ಗಕ್ಕೇ ಸೀಮಿತವಾಗಿದ್ದ ತಾಂತ್ರಿಕ ಶಿಕ್ಷಣವನ್ನು ಗ್ರಾಮೀಣ ಪ್ರದೇಶಕ್ಕೆ ವಿಸ್ತರಿಸಿದ ಕೀರ್ತಿ ಶ್ರೀ ಸಿದ್ಧಗಂಗಾ ಮಠದ್ದು ಎಂದು ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಶ್ಲಾಘಿಸಿದರು.

ತಾಂತ್ರಿಕತೆ ಮತ್ತು ಕಂಪ್ಯೂಟರ್ ಶಿಕ್ಷಣವನ್ನು ಯಾರೂ ನಿರ್ಲಕ್ಷಿಸುವರೋ ಅಂತಹ ಜನರು ಸಮಕಾಲೀನ ಸಮಾಜದ ಬದಲಾವಣೆಯ ಸಂದರ್ಭದಲ್ಲಿ ಮುಖ್ಯವಾಹಿನಿಗೆ ಸೇರ್ಪಡೆಯಾಗಲು ಸಾಧ್ಯವಾಗುವುದಿಲ್ಲ ಎಂದು ತಿಳಿಸಿದ ಮಾನ್ಯ ಮುಖ್ಯಮಂತ್ರಿಗಳು ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ೬೦ ಲಕ್ಷ ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟ ಒದಗಿಸುವ ಮಹತ್ವಾಕಾಂಕ್ಷೆಯ ಅಕ್ಷರ ದಾಸೋಹ ಯೋಜನೆಗೆ ಶ್ರೀ ಸಿದ್ಧಗಂಗಾ ಮಠದ ನಿತ್ಯದಾಸೋಹವೇ ಪ್ರೇರಣೆ ಎಂದು ನುಡಿದರು.

ರಕ್ಷಣಾ ಸಚಿವರಿಂದ ಭಾಷಣ

ರಕ್ಷಣಾ ಸಚಿವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ

ರಾಜ್ಯದ ಮೂಲೆ ಮೂಲೆಗಳಿಂದ ಬರುವ ಬಡ ಕುಟುಂಬಗಳ ಮಕ್ಕಳಿಗೆ ಜಾತಿ, ಮತ, ಪಂಥ ಭೇದವಿಲ್ಲದೇ ಶಿಕ್ಷಣ, ಧರ್ಮ ಹಾಗೂ ಅನ್ನದಾಸೋಹ ಮಾಡುತ್ತಿರುವ ಶ್ರೀಮಠದಿಂದಲೇ ಪ್ರೇರಣೆ ಪಡೆದು ಈ ಮಹತ್ವದ ಯೋಜನೆಯನ್ನು ಸರ್ಕಾರ ಆರಂಭಿಸಿತು. ಮುಂಬರುವ ಶೈಕ್ಷಣಿಕ ಸಾಲಿನಿಂದ ಈ ಯೋಜನೆ ಯನ್ನು ಏಳನೇ ತರಗತಿವರೆಗಿನ ಮಕ್ಕಳಿಗೆ ವಿಸ್ತರಿಸಲು ಕ್ರಮಕೈಗೊಳ್ಳ ಲಾಗುವುದು ಎಂದು ತಿಳಿಸಿದರು.

''ನಿಜವಾದ ಸನ್ಯಾಸಿಯಾಗಿರುವ ಪೂಜ್ಯ ಶ್ರೀಗಳವರು ಸನ್ಯಾಸಿಗೆ ಇರುವ ನಿಜವಾದ ಮೌಲ್ಯ ಮತ್ತು ಅರ್ಥವಂತಿಕೆಗೆ ಬೆಲೆ ಬರುವಂತೆ ನಡೆದುಕೊಳ್ಳುತ್ತಿದ್ದಾರೆ. ರಾಜ್ಯದಲ್ಲಿ ಆರ್ಥಿಕ ಸ್ಥಿತಿ ಬಹುದೊಡ್ಡದಾಗಿ ಹೊಂದಿರುವ ಮಠಗಳು ಇರಬಹುದು.





ಆದರೆ ಜನಸೇವೆಯಲ್ಲಿ ಸಿದ್ಧಗಂಗಾ ಅಗ್ರಸ್ಥಾನ ಪಡೆದಿದೆ'' ಎಂದು ಮುಕ್ತಕಂಠದಿಂದ ಪ್ರಶಂಸಿಸಿದರು.

''ರಾಜ್ಯದಲ್ಲಿ ಮಠಮಾನ್ಯಗಳು ಮತ್ತು ಕ್ರೈಸ್ತ ಸಂಸ್ಥೆಗಳು ಶಿಕ್ಷಣ ಮತ್ತು ಜನಸೇವೆಯಲ್ಲಿ ಸರ್ಕಾರಕ್ಕಿಂತ ಒಂದು ಹೆಜ್ಜೆ ಮುಂದಿದೆ. ಇದರಿಂದಾಗಿ ವೃತ್ತಿಪರ ಮತ್ತು ಉನ್ನತ ಶಿಕ್ಷಣ ಹಾಗೂ ಪ್ರಾಥಮಿಕ ಶಿಕ್ಷಣವನ್ನು ಈ ಸಂಸ್ಥೆಗಳು ನೀಡುವ ಮೂಲಕ ಸರ್ಕಾರದ ಹೊರೆಯನ್ನು ಸಾಕಷ್ಟು ಕಡಿಮೆ ಮಾಡಿವೆ'' ಎಂದು ಕೃತಜ್ಞತೆ ಸಲ್ಲಿಸಿದರು.

''೧೨ನೇ ಶತಮಾನದ ಬಸವಾದಿ ಶರಣರು ನಡೆಸಿದ ವೈಚಾರಿಕ ಕ್ರಾಂತಿಯನ್ನು ಸಮಕಾಲೀನವಾಗಿ ಪ್ರಯೋಗಕ್ಕೆ ಒಪ್ಪಿಕೊಂಡಿರುವ ಸಿದ್ಧಗಂಗಾ ಶ್ರೀಗಳು ನಾಡಿನ ಚಿಂತನೆಗೆ ಹೆಚ್ಚು ಆದ್ಯತೆ ನೀಡಿದ್ದಾರೆ. ಕೆಲದಶಕಗಳ ಹಿಂದೆ ಶ್ರೀಮಠವನ್ನು ಶ್ರೀ ಉದ್ದಾನ ಶಿವಯೋಗಿಗಳು ಮುಕ್ತ ಸಂಸ್ಥೆಯನ್ನಾಗಿಸಿದರು. ಆನಂತರ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಎಲ್ಲ ವರ್ಗಗಳ ಮಕ್ಕಳಿಗೆ ಅನ್ನ ಮತ್ತು ವಿದ್ಯೆ ನೀಡುವಲ್ಲಿ ಇನ್ನಷ್ಟು ಮುಕ್ತತೆ ತೋರಿಸಿದ್ದಾರೆ'' ಎಂದು ಶ್ಲಾಘಿಸಿದರು.

ಇದೇ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಮುಖ್ಯಮಂತ್ರಿ, ಶ್ರೀ ಎಸ್.ಎಂ. ಕೃಷ್ಣ ಅವರನ್ನು ಶಾಲು ಹೊದಿಸಿ, ಫಲತಾಂಬೂಲ ಹಾಗೂ ಸ್ಮರಣ ಫಲಕ ನೀಡಿ ಆಶೀರ್ವದಿಸಿದರು.

ಮುಖ್ಯಮಂತ್ರಿಗಳವರಿಂದ ನುಡಿನಮನ

ಪೂಜ್ಯ ಶ್ರೀ ಶ್ರೀಗಳವರಿಂದ ಮುಖ್ಯಮಂತ್ರಿಗಳಿಗೆ ಆಶೀರ್ವಾದ

### ಭಕ್ತಿ ಸಮರ್ಪಣೆ

ಶ್ರೀ ಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಭಕ್ತಿಸಮರ್ಪಣೆ ಸಲ್ಲಿಸುತ್ತಾ ''ಪರಮಪೂಜ್ಯರು ನಾಡಿಗೆ, ರಾಷ್ಟ್ರಕ್ಕೆ ಸಲ್ಲಿಸಿದ ಸೇವೆಗೆ ಕೃತಜ್ಞತೆಯನ್ನು ಸಲ್ಲಿಸಲು ಸೇರಿದ್ದೇವೆ. ಪೂಜ್ಯರು ನಮಗೆಲ್ಲ ಬದುಕಿನ ಮಾರ್ಗವನ್ನು ಕರುಣಿಸಿದರು. ಲೋಕಕಲ್ಯಾಣಕ್ಕಾಗಿ ತಮ್ಮ ಜೀವನವನ್ನು ಅರ್ಪಿಸಿ ಕೊಂಡಿದ್ದಾರೆ. ಅವರು ಒಂದು ಮರವಾಗಿ ನಮಗೆಲ್ಲ ನೆರಳು ನೀಡುತ್ತಿದ್ದಾರೆ. ಬೇರೆಯವರ ಸಂತೋಷಕ್ಕಾಗಿ ಮಾಡುವ ಸೇವೆ ಶಾಶ್ವತವಾದ ಸಂತೋಷವನ್ನು ನೀಡುತ್ತಿದೆ. ಮಕ್ಕಳ ಆಟಪಾಠಗಳಲ್ಲಿ ಪೂಜ್ಯರು

ಸಂತೋಷಪಡುತ್ತಾರೆ. ಪೂಜ್ಯರ ಸಾಧನೆ ನಮಗೆಲ್ಲ ದಾರಿದೀಪವಾಗಿದೆ'' ಎಂದು ತಿಳಿಸಿದರು.

''ಉಪಕಾರ ಸ್ಮರಣೆ ಎಂಬುದು ಮಾನವನ ಉತ್ತಮೋತ್ತಮ ಗುಣಗಳಲ್ಲಿ ಶ್ರೇಷ್ಠವಾದದು. ಅದನ್ನೆ ದೊಡ್ಡವರು ಸಜ್ಜನಿಕೆ, ಸಂಸ್ಕೃತಿ, ಮಾನವಿಯತೆ ಎಂದಿದ್ದಾರೆ. ಅದರಂತೆ ಸಜ್ಜನಿಕೆಯ ಹಿನ್ನೆಲೆಯಲ್ಲಿ ನಾವೆಲ್ಲರೂ ಸದ್ಭಾವನೆಯಿಂದ ಪರಮಪೂಜ್ಯರು ಸಮಾಜಕ್ಕೆ, ನಾಡಿಗೆ ಮಾಡಿರುವ ಉಪಕಾರವನ್ನು ಸ್ಮರಿಸಲು ಇಲ್ಲಿ ಸೇರಿದ್ದೇವೆ.

ಪರಮಪೂಜ್ಯರು ೧೯೦೮ರ ಏಪ್ರಿಲ್ ೧ರಂದು ಜನ್ಮತಾಳಿ, ಪದವಿ ಶಿಕ್ಷಣವನ್ನು ಆ ಕಾಲದಲ್ಲಿಯೇ ಅತ್ಯುತ್ತಮ ರೀತಿಯಲ್ಲಿ ಗಳಿಸಿ, ಲಿಂಗೈಕ್ಯ ಶ್ರೀ ಉದ್ದಾನ ಶಿವಯೋಗಿಗಳ ಕೃಪಾಕಟಾಕ್ಷಕ್ಕೆ ಒಳಗಾಗಿ ೧೯೩೦ರಲ್ಲಿ ಅವರ ಉತ್ತರಾಧಿಕಾರಿಗಳಾಗಿ, ೧೯೪೧ರಿಂದ ಶ್ರೀಮಠದ ಪೂರ್ಣ ಜವಾಬ್ದಾರಿಯನ್ನು ಸ್ವೀಕರಿಸಿ, ಅಂದಿನಿಂದ ನಿರಂತರವಾಗಿ ಲಕ್ಷಾಂತರ ವಿದ್ಯಾರ್ಥಿಗಳ ಪಾಲಿಗೆ ಬೆಳಕಾಗಿದ್ದಾರೆ ಎಂದು ತಿಳಿಸಿದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಕವಿವಾಣಿಯನ್ನು ಉಲ್ಲೇಖಿಸುತ್ತಾ :

*ಭಿಕ್ಷೆ ಹೊರಟಿದೆ ಜಂಗಮದ ಜೋಳಿಗೆ ಲಕ್ಷ ಜನಗಳ ಪೊರೆದಿದೆ*
*ತೀರ್ಥವಾಗಿದೆ ಭಕ್ತರಿಗೆ ಜೊತೆಗೇ ಸ್ಫೂರ್ತಿಯಾಗಿದೆ ಬುದ್ಧಿಗೆ*
*ಬಂದ ಹಣತೆಗೆ ಎಣ್ಣೆ ಬತ್ತಿಯ ದೀಪ್ತಿದಾನವ ಮಾಡಿದೆ*
*ರಕ್ಷೆಯಾಗಿದೆ ಮುಗಿಲ ನೇರಿದ ಎಷ್ಟೊರೆಕ್ಕೆಯ ಹಾದಿಗೆ*

ಎಂದಿರುವಂತೆ ಜಾತಿ ಮತ ಪಂಥವೆನ್ನದೆ ಬಂದ ವಿದ್ಯಾರ್ಥಿಗಳಿಗೆ ತೆರೆದ ಬಾಗಿಲಾಗಿರಿಸಿ ತ್ರಿವಿಧ ದಾಸೋಹವನ್ನು ಉಣಬಡಿಸಿ ಸುಶಿಕ್ಷಿತ ವ್ಯಕ್ತಿಗಳನ್ನಾಗಿಸಿದ್ದಾರೆ. ಪೂಜ್ಯರು ನಮಗೆಲ್ಲ ಬದುಕಿನ ಭಾಗ್ಯವನ್ನು ಕರುಣಿಸಿದ್ದಾರೆ.

ತಮ್ಮ ಅಖಂಡವಾದ ಶಿವಯೋಗ ತಪಸ್ಸನ್ನು ಸಮಾಜದ ಹಿತಕ್ಕಾಗಿ ಲೋಕ ಕಲ್ಯಾಣಕ್ಕಾಗಿ ಧಾರೆಯೆರೆಯುತ್ತಿದ್ದಾರೆ. ಲೋಕ ಏಳುವ ಮುನ್ನ ಬ್ರಾಹ್ಮೀಮುಹೂರ್ತದಲ್ಲೇ ಶಿವಯೋಗ ತಪಸ್ಸಿನಲ್ಲಿ ತೊಡಗುತ್ತಾರೆ. ಅದು ನಮಗಾಗಿ, ಸಮಾಜಕ್ಕಾಗಿ, ಲೋಕಾನುಗ್ರಹಕ್ಕಾಗಿ. ನಾವೆಲ್ಲ ನೋಡುತ್ತಿರುವಂತೆ ಪೂಜ್ಯರು ಬೆಳಗಿನಿಂದ ರಾತ್ರಿಯವರೆಗೆ ಕ್ಷಣವನ್ನೂ ವ್ಯರ್ಥಗೊಳಿಸದೆ ಅವಿಶ್ರಾಂತವಾಗಿ ಶ್ರೀಗಂಧದ ಕೊರಡಿನಂತೆ ದೇಹವನ್ನು ಲೋಕಹಿತಕ್ಕಾಗಿ ತೇಯುತ್ತಿದ್ದಾರೆ. ''ಶಿವಯೋಗಿಯ ಶರೀರ ವೃಥಾ ಸವೆಯಲಾಗದು'' ಎಂಬುದನ್ನು ಪ್ರಮಾಣೀಕರಿಸಿದ್ದಾರೆ. ಇದು ಯಾರಿಗಾಗಿ ಕೀರ್ತಿವಾರ್ತೆ ಸ್ವರ್ಗಾಪವರ್ಗದಿಚ್ಛೆಗಾಗಿ ಅಲ್ಲವೇ ಅಲ್ಲ.



ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರಿಂದ ಭಕ್ತಿ ಸಮರ್ಪಣೆ

*ನತ್ವಹಂ ಕಾಮಯೇ ರಾಜ್ಯಂ*
*ನ ಸ್ವರ್ಗಂ ನ ಪುನರ್ಭವಂ*
*ಕಾಮಯೇ ದುಃಖ ತಪ್ತಾನಾಂ*
*ಪ್ರಾಣಿನಾಂ ಆರ್ತಿನಾಶಾನಂ ॥*

ಭವರೋಗಿಗಳ ಹಾಗು ದುಃಖಿತಪ್ತ ಜೀವ ಜಂತುಗಳ ದುಃಖನಿವಾರಣೆಗಾಗಿ.

*ಒಬ್ಬ ಸುಭಾಷಿತಕಾರ ಹೇಳುವಂತೆ*

*ಸ್ವಸುಖ ನಿರಭಿಲಾಷಃ ಖಿದ್ಯತೇ ಲೋಕ ಹೇತೋಃ*
*ಪ್ರತಿ ದಿನಮಥವಾ ತೇ ವೃತ್ತಿರೇವಂ ವಿಧೈವ*
*ಅನುಭವತಿ ಹಿ ಮೂರ್ಧ್ನಾ ಪಾದಪಸ್ತೀವ್ರಮುಷ್ಣಂ*
*ಶಮಯತಿ ಪರಿತಾಪಂ ಛಾಯಯಾ ಸಂಶ್ರಿತಾನಾಂ*





## ಶ್ರೀ ಶ್ರೀಗಳವರಿಗೆ ಭಕ್ತರಿಂದ ಭಕ್ತಿ ಸಮರ್ಪಣೆ

ಏಪ್ರಿಲ್ ೧, ೨೦೦೮ರಂದು ಬೆಳಿಗ್ಗೆ ಶ್ರೀಮಠದ ಹಳೆ ಮಠದ ಆವರಣದಲ್ಲಿ ಸಂತಸ, ಸಂಭ್ರಮದ ಸಡಗರ. ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನ ಪಡೆದು ಆಶೀರ್ವಾದ ಪಡೆಯಬೇಕೆಂಬ ಹಂಬಲದಿಂದ ಸಾವಿರಾರು ಜನ ಭಕ್ತರು, ಅಭಿಮಾನಿಗಳು ಸೇರಿದ್ದರು. ತ್ರಿವಿಧ ದಾಸೋಹಮೂರ್ತಿ, ಕಾಯಕಯೋಗಿ, ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ೯೭ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದ ಶುಭದಿನ.

ಶ್ರೀಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಪಾದಪೂಜೆ ಮಾಡುವುದರ ಮೂಲಕ ಎಲ್ಲರ ಪರವಾಗಿ ಭಕ್ತಿ ಸಮರ್ಪಣೆ ಮಾಡಿದರು. ಭಕ್ತರು, ಅಭಿಮಾನಿಗಳು ಸಾಲಿನಲ್ಲಿ ನಿಂತು ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು.

### *ಅನುಭಾವ ಜ್ಯೋತಿ ಬಿಡುಗಡೆ*

ಇದೇ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ನುಡಿಗಳ ಸಾರಸಂಗ್ರಹ 'ಅನುಭಾವ ಜ್ಯೋತಿ' ಕೃತಿಯನ್ನು ಪೂಜ್ಯ ಶ್ರೀ ಶ್ರೀಗಳವರು ಬಿಡುಗಡೆ ಮಾಡಿ ಭಕ್ತರಿಗೆ ಆಶೀರ್ವಾದಪೂರ್ವಕವಾಗಿ ಅನುಗ್ರಹಿಸಿದರು. ಈ ಕೃತಿಯನ್ನು ಜಾನಪದ ವಿದ್ವಾಂಸರೂ ಹಾಗೂ ಹಿರಿಯ ಪತ್ರಕರ್ತರೂ ಆದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಸಂಪಾದಿಸಿದ್ದು. ಇದರ ಪ್ರಕಟಣೆಯ ಹೊಣೆಯನ್ನು ಬೆಂಗಳೂರು ನಗರದ ಪ್ರಸಿದ್ಧ ಮುದ್ರಣಕಾರರೂ, ಶ್ರೀಮಠದ ಮತ್ತು ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಅಪಾರ ಭಕ್ತಿ ಗೌರವವನ್ನಿಟ್ಟುಕೊಂಡಿರುವ ಗೀತಾಂಜಲಿ ಗ್ರಾಫಿಕ್ಸ್‌ನ ಮಾಲೀಕರಾದ ಶ್ರೀ ಜಿ. ನಾಗಸುಂದರ್ ಅವರು ವಹಿಸಿಕೊಂಡು ಆಕರ್ಷಕವಾಗಿ ಮುದ್ರಿಸಿಕೊಟ್ಟಿದ್ದಾರೆ. ಅವರಿಗೆ 'ಸಿದ್ಧಗಂಗಾ' ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಒಂದು ದೊಡ್ಡ ಮರ, ಸುಡುವ ಬಿಸಿಲನ್ನು ತನ್ನ ನೆತ್ತಿಯಲ್ಲಿ ಹೊತ್ತು ತನ್ನನ್ನಾಶ್ರಯಿಸಿ ಬಂದ ಜೀವಜಂತುಗಳಿಗೆ ನೆರಳನ್ನಿತ್ತು ಹಣ್ಣು ಕೊಟ್ಟು ಕಾಪಾಡುವಂತೆ ನಮ್ಮ ಪರಮಪೂಜ್ಯರು ತಾವು ಕಷ್ಟಪಟ್ಟು ಆಶ್ರಯಿಸಿದವರಿಗೆ ಅಸನ ವಸತಿ ಅಭಯಗಳನ್ನಿತ್ತು ಕಾಪಾಡಿದ್ದಾರೆ/ ಕಾಪಾಡುತ್ತಿದ್ದಾರೆ. ಸಹಸ್ರಾರು ವಿದ್ಯಾರ್ಥಿಗಳ ಪಾಲಿನ ತಾಯಿಯಾಗಿದ್ದಾರೆ.

*''ವಿದ್ಯಾರ್ಥಿಗಳು ಮಠದೊಳಗೆ ಹೊರಗೆ ಓಡಾಡುವುದ*
*ಕಂಡು ನಿಮ್ಮ ಮನ ಒಳಗೊಳಗೆ ನಲಿನಲಿದಾಡುವುದಯ್ಯ*
*ವಿದ್ಯಾರ್ಥಿಗಳು ಮಠದೊಳಗೆ ಹೊರಗೆ ಆಡುವುದು*
*ಪಾಡುವುದ ಕಂಡು ನಿಮ್ಮ ಮನ ಒಳಗೊಳಗೆ ಕುಣಿಕುಣಿವುದಯ್ಯಾ*
*ವಿದ್ಯಾರ್ಥಿಗಳು ಮಠದೊಳಗೆ ಹೊರಗೆ ಉಂಬುವುದು*
*ಓದುವುದ ಕಂಡು ನಿಮ್ಮ ಮನ ಒಳಒಳಗೆ ಹಿರಿ ಹಿಗ್ಗುವುದಯ್ಯ*
*ವಿದ್ಯಾರ್ಥಿಗಳು ಮಠದೊಳಗೆ ಹೊರಗೆ ವಿರಾಮ ಕಾಲದೊಳು*
*ಸುಳಿದಾಡದಿರ್ದಡೆ ನಿಮ್ಮ ಮನ ಒಳಗೊಳಗೆ ಕುಂದಿ ಕುಂದಿ ಬಾಡುವುದಯ್ಯಾ*
*ಇಂತು ವಿದ್ಯಾರ್ಥಿಗಳೆಂದರೆ ನಿಮಗೆ ಪಂಚ ಪ್ರಾಣವಯ್ಯ,*
*ಶಿವಗುರು ಶ್ರೀ ಶಿವಕುಮಾರ ಪ್ರಭುವೇ''*

ಎನ್ನುವ ಆಧುನಿಕ ವಚನಕಾರರ ಮಾತು ಸತ್ಯಸ್ಯ ಸತ್ಯವಾಗಿದೆ.

ವಿದ್ಯಾರ್ಥಿಗಳ ಸೇವೆಯಲ್ಲಿ ಪೂಜ್ಯರು ಶಾಶ್ವತವಾದ ಸಂತೋಷದ ಅನುಭವವನ್ನು ಕಂಡಿದ್ದಾರೆ. ಸಾಮಾನ್ಯವಾಗಿ ಲಾಟರಿ ಹೊಡೆದರೆ, ಒಳ್ಳೆ ಬಟ್ಟೆ ತೊಟ್ಟರೆ, ಒಳ್ಳೆ ಊಟ ಮಾಡಿದರೆ, ನೌಕರಿಯಲ್ಲಿ ಬಡ್ತಿ ದೊರೆತರೆ, ಸೇವೆಯನ್ನು ಗುರುತಿಸಿ ಸನ್ಮಾನಿಸಿದರೆ ಸಂತೋಷವುಂಟಾಗುತ್ತದೆ. ಇದು ಸಾಮಾನ್ಯವಾದುದು ಹಾಗು ಕ್ಷಣಿಕವಾದದ್ದು. ಆದರೆ ಇನ್ನೊಬ್ಬರ ಹಿತಕ್ಕಾಗಿ, ಒಳಿತಾಗಿ, ನಿಸ್ವಾರ್ಥದಿಂದ ಮಾಡುವ ಸೇವೆಯಿಂದಾಗುವ ತೃಪ್ತಿ ಸಂತೋಷ, ಶಾಶ್ವತವಾದದ್ದು. ಅಂತಹ ಸಂತೋಷವನ್ನು ಪೂಜ್ಯ ಗುರುದೇವರು ತಾವು ಅನುಭವಿಸಿ ಲೋಕಕ್ಕೆ ಹಂಚುತ್ತಿದ್ದಾರೆ. ''ಸಂತೋಷಂ ಜನಯೇತ್ ಪ್ರಾಜ್ಞಃ ತದೇವ ಈಶ್ವರ ಪೂಜನಂ'' ಎಂಬುದನ್ನು ಬದುಕಿನ ದಿನನಿತ್ಯದ ಕರ್ತವ್ಯವನ್ನಾಗಿಸಿ ಆಯುಷ್ಯದ ಪ್ರತಿಕ್ಷಣವನ್ನು ಅದಕ್ಕಾಗಿ ಮೀಸಲಿರಿಸಿದ್ದಾರೆ.

### *ಬಸವಣ್ಣನವರ ಮಾತಿನಂತೆ*

*ಆಡಿ ಕಾಲು ದಣಿಯವು ನೋಡಿ ಕಣ್ಣು ದಣಿಯವು*
*ಹಾಡಿ ನಾಲಗೆ ದಣಿಯದು ಇನ್ನೇವೆನಿನ್ನೇವೆ*
*ನಿಮ್ಮ ಕೈಯಾರೆ ಪೂಜಿಸಿ ಮನ ದಣಿಯಲೊಲ್ಲದು*

ಇಂಥಹ ಮಹಾಗುರುವಿನ ದಿನನಿತ್ಯದ ದರ್ಶನ, ಅವರ ಪ್ರಸಾದವಾಣಿ ಅವರ ಪಾದಸ್ಪರ್ಶದಿಂದ ನಾವೆಲ್ಲರು ಕಣ್ಣಿನ ಸೂತಕ, ಕಿವಿಯ ಸೂತಕ, ತನುಮನದ ಸೂತಕಗಳನ್ನು ಕಳೆದುಕೊಂಡು ಪವಿತ್ರರಾಗುತ್ತೇವೆ. ಪರಮಪೂಜ್ಯರು ಈ ಭುವನದ ಭಾಗ್ಯ, ನಾಡಿನ ಪುಣ್ಯ ನಮ್ಮೆಲ್ಲರನ್ನು ಉದ್ಧರಿಸಲು ಈ ರೂಪದಲ್ಲಿರುವ ದೈವಸ್ವರೂಪರಾಗಿದ್ದಾರೆ. ಪ್ರತಿದಿನವನ್ನು ವರ್ಷದ ಶ್ರೇಷ್ಠದಿನವೆಂದು ಭಾವಿಸಿ ೯೭ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದ್ದಾರೆ. ಇಂಥ ಪರಮಪೂಜ್ಯರ ೯೭ನೇ ಜನ್ಮದಿನದ ಸಂದರ್ಭದಲ್ಲಿ ಭಕ್ತಿ ಸಮರ್ಪಣೆಯೆಂದರೆ ಅವರ ಆದೇಶವನ್ನು ಕಾಯೇನ ವಾಚಾ ಮನಸಾ ಆಚರಣೆಯಲ್ಲಿ ತರುವುದೇ ಆಗಿದೆ.

"Grattitude should not be in mere words, it should be expressed in conduct and life." ಗುರುವಿನಲ್ಲಿ ಭಕ್ತಿ ಶ್ರದ್ಧೆಗಳು ಕೇವಲ ಮಾತಿನಲ್ಲಿ ಇರದೆ ನಡವಳಿಕೆಯಲ್ಲಿ ಹಾಗೂ ಜೀವನದಲ್ಲಿ ಇರಬೇಕು.

ಬಸವಣ್ಣನವರ ವಚನದಂತೆ

*ಮಾತಿನ ಮಾತಿನಲ್ಲಿಪ್ಪದೆ ಭಕ್ತಿ? ಮಾಡಿ*
*ತನುಸವೆಯದನ್ನಕ್ಕ ಮನಸವೆಯದನ್ನಕ್ಕ*
*ಅಪ್ಪದೇ ಭಕ್ತಿ? ಕೂಡಲಸಂಗಮದೇವ.*
*ಎನಗೆ ನಿಮ್ಮ ನೆನಹಾದಾಗಲೇ ಉದಯ*
*ಎನಗೆ ನಿಮ್ಮ ಮರಹಾದಾಗಲೇ ಅಸ್ತಮಾನ*
*ಎನಗೆ ನಿಮ್ಮ ನೆನಹವೇ ಪ್ರಾಣ, ಕಾಣಾ, ಸ್ವಾಮಿ ತಂದೆ.*
*ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯ*
*ವದನದಲ್ಲಿ ಷಡಕ್ಷರಿಯ ಬರೆಯಯ್ಯಾ ಕೂಡಲಸಂಗಮದೇವಾ.*

ಎಂಬ ನುಡಿಗಳಂತೆ ನಡೆಯುವುದೆ ಭಕ್ತಿಯಾಗುತ್ತದೆ. ಅಂತಹ ರೀತಿಯಲ್ಲಿ ಸದಾ ನಡೆಯುವಂತೆ ಶ್ರೀ ಗುರುವಿನ ಅನುಗ್ರಹ ಶ್ರೀರಕ್ಷೆಯಾಗಿರಬೇಕಾಗಿದೆ. ಪೂಜ್ಯರ ಜೀವನ ಅನುಭವ, ಸಾಧನೆ, ಸೇವೆಸಿದ್ಧಿಗಳು ನಮ್ಮೆಲ್ಲರ ಜೀವನದ ಬೆಳಕಾಗಲೆಂದು'' ಎಂದು ನುಡಿದರು.




ಶ್ರೀ ಎಂ.ವಿ. ರಾಜಶೇಖರನ್ ಅವರಿಂದ ಪ್ರಾಥಮಿಕ ಶಾಲಾ ಕಟ್ಟಡದ ಉದ್ಘಾಟನೆ

### *ಪ್ರಾಥಮಿಕ ಶಾಲಾ ಕಟ್ಟಡದ ಉದ್ಘಾಟನೆ*

ಬಸವೇಶ್ವರ ಪ್ರಾಥಮಿಕ ಶಾಲಾ ನೂತನ ಕಟ್ಟಡವನ್ನು ಉದ್ಘಾಟಿಸಿದ ರಾಜ್ಯಸಭಾ ಸದಸ್ಯ ಶ್ರೀ ಎಂ.ವಿ. ರಾಜಶೇಖರನ್ ಅವರು ''ಪರಮಪೂಜ್ಯ ಶ್ರೀ ಶ್ರೀಗಳವರಲ್ಲಿ ಬಸವಣ್ಣನವರನ್ನು ಕಾಣುತ್ತೇವೆ. ಅವರ ಸೇವೆ, ಮಾರ್ಗದರ್ಶನ ಇನ್ನು ಹಲವಾರು ವರ್ಷಗಳ ಕಾಲ ನಾಡಿಗೆ, ದೇಶಕ್ಕೆ ಸಲ್ಲಲಿ ಎಂದು ಹಾರೈಸಿದರು. ಪೂಜ್ಯ ಶ್ರೀ ಶ್ರೀಗಳವರು ಸಲ್ಲಿಸುತ್ತಿರುವ ನಿಷ್ಕಾಮ ಸೇವೆಗೆ 'ಭಾರತರತ್ನ' ಪ್ರಶಸ್ತಿ ಬರಬೇಕೆಂದು'' ಆಶಿಸಿದರು.

### *ಸನ್ಮಾನ*

ನಾಡಿನ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆಸಲ್ಲಿಸಿದ ಡಾ. ಎಸ್.ಜೆ. ನಾಗಲೋಟಿಮಠ ಅವರಿಗೆ 'ವಿಭೂತಿಪ್ರಿಯ', ಡಾ. ಎಚ್.ಎಲ್. ನಾಗೇಗೌಡ ಅವರಿಗೆ 'ಜಾನಪದ ಭೀಷ್ಮ', ಪ್ರೊ. ಎನ್. ಬಸವಾರಾಧ್ಯ ಅವರಿಗೆ **'ಸಂಶೋಧಕ ಶಿವರತ್ನ'** ಹಾಗೂ ಉದ್ಯಮಿ ಶ್ರೀ ಎಸ್.ಆರ್. ಜಗದೀಶ್ ಅವರಿಗೆ **'ಕೈಗಾರಿಕಾ ಶಿವರತ್ನ'** ಬಿರುದು ನೀಡಿ ಪೂಜ್ಯ ಶ್ರೀ ಶ್ರೀಗಳವರು ಶಾಲು ಹೊದಿಸಿ ಫಲತಾಂಬೂಲ, ಪ್ರಶಸ್ತಿ ಫಲಕ ನೀಡಿ ಆಶೀರ್ವದಿಸಿದರು.

ಸನ್ಮಾನಿತರ ಪರವಾಗಿ ಮಾತನಾಡಿದ ಡಾ. ಎಸ್.ಜೆ. ನಾಗಲೋಟಿಮಠ ಅವರು ''ದೇವರು ಯಾರು? ದೇವರು ಎಲ್ಲಿದ್ದಾನೆ? ದೇವರು ಹೇಗಿದ್ದಾನೆ? ಎಂಬ ಪ್ರಶ್ನೆಯನ್ನು ಕೇಳಿದ ಡಾ. ನಾಗಲೋಟಿಮಠ ಅವರು ದೇವರನ್ನು ಪೂಜ್ಯ ಸ್ವಾಮೀಜಿ ಅವರಲ್ಲಿ





ಕಾಣುತ್ತಿದ್ದೇವೆ. ಆದರೆ ಸ್ವಾಮೀಜಿ ಅವರು ಸಣ್ಣ ಮಕ್ಕಳಲ್ಲಿ, ವಿದ್ಯಾರ್ಥಿಗಳಲ್ಲಿ ದೇವರನ್ನು ಕಾಣುತ್ತಿದ್ದಾರೆ ಎಂದು ತಿಳಿಸಿದ ಡಾ. ಮಠ ಅವರು ಕರ್ನಾಟಕ, ಕೇಂದ್ರ ಸರ್ಕಾರಗಳ ಅನಾಸಕ್ತಿಯಿಂದ ಪೂಜ್ಯರ ವಿಚಾರಧಾರೆ. ಅವರು ಸಲ್ಲಿಸುತ್ತಿರುವ ನಿಷ್ಕಾಮ ಸೇವೆ ಬೇರೆ ದೇಶಗಳ ಜನರಿಗೆ ಪರಿಚಯವಾಗಿಲ್ಲ'' ಎಂದು ವಿಷಾದಿಸಿದರು. ಶ್ರೀ ಎಸ್.ಆರ್. ಜಗದೀಶ್ ಅವರು ಈ ಸಂದರ್ಭದಲ್ಲಿ ತಮ್ಮ ಅನುಭವಗಳನ್ನು ಹಂಚಿಕೊಂಡರು.

### *ಸುತ್ತೂರು ಶ್ರೀಗಳವರಿಂದ ಆಶೀರ್ವಚನ*

ಸಮಾರಂಭದ ದಿವ್ಯಸಾನ್ನಿಧ್ಯವಹಿಸಿದ್ದ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನ ಭಾಷಣದಲ್ಲಿ ''ತಮ್ಮ ಭೌತಿಕ ಸುಖಕ್ಕಿಂತ ಸಮಾಜದ ಹಿತಕ್ಕಾಗಿ ತಮ್ಮನ್ನು ಪೂಜ್ಯ ಶ್ರೀ ಶ್ರೀಗಳವರು ಅರ್ಪಿಸಿಕೊಂಡಿದ್ದಾರೆ. ಅವರು ಆದರ್ಶದ ಜೀವನವನ್ನು ನಡೆಸಿದವರು. ನೈತಿಕ ನಿಷ್ಠೆ, ಪೂಜಾ ತಪಸ್ಸು ಇವೆಲ್ಲ ಸಮ್ಮಿಳತಗೊಂಡು ಅವರು ಬದುಕನ್ನು ಅದ್ಭುತವಾದ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದಾರೆ ಎಂದು ತಿಳಿಸಿದ ಸುತ್ತೂರು ಜಗದ್ಗುರುಗಳು ಕಾಯಕದಲ್ಲಿಯೇ ಕೈಲಾಸವನ್ನು ಕಂಡವರು. ಅಪರೂಪದ ಯತಿವರೇಣ್ಯರು ಪೂಜ್ಯ ಶ್ರೀಗಳವರು, ಶ್ರೀ ಕ್ಷೇತ್ರವನ್ನು ಅದ್ಭುತವಾಗಿ ಬೆಳೆಸಿದ್ದಾರೆ. ಇಲ್ಲಿ ಪ್ರತಿನಿತ್ಯ ಮಹತ್ತರವಾದ ಕೆಲಸಗಳು ನಡೆಯುತ್ತಿವೆ ಎಂಬುದೇ ಅಚ್ಚರಿಯನ್ನು ಮೂಡಿಸುವಂತಿದೆ. ಶ್ರೀಮಠದ ಸೇವಾಕಾರ್ಯ ಅದ್ಭುತವಾದುದು. ಇದು ಈ ದೇಶದ, ಈ ನಾಡಿನ ಪುಣ್ಯ ವಿಶೇಷ ಎಂದು ನುಡಿದರು. ಜೇವರ್ಗಿ ಶ್ರೀ ಷಣ್ಮುಖ ಶಿವಯೋಗಿ ಸಂಸ್ಥಾನಮಠ ಅಧ್ಯಕ್ಷರಾದ ಶ್ರೀ ಮ.ನಿ.ಪ್ರ.ಸ್ವ. ಶ್ರೀ ಶ್ರೀ ಶಾಂತಲಿಂಗ ಮಹಾಸ್ವಾಮಿಗಳು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.



ಸುತ್ತೂರು ಶ್ರೀಗಳವರಿಂದ ಆಶೀರ್ವಚನ



ಶ್ರೀ ಯಜಮಾನ್ ಚಿಕ್ಕವೀರಪ್ಪ ಅವರಿಂದ ಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ

### *ಪೂಜ್ಯ ಶ್ರೀಗಳವರಿಂದ ಆಶೀರ್ವಚನ*

''ನೀವೆಲ್ಲರೂ ಅತ್ಯಂತ ಪ್ರೀತಿ ವಿಶ್ವಾಸಗಳಿಂದ ಇಂದಿನ ಸಮಾರಂಭದಲ್ಲಿ ಭಾಗವಹಿಸುತ್ತಿರುವುದು ಅತೀವ ಆನಂದ ಉಂಟಾಗಿರುತ್ತದೆ. ತೊಂಬತ್ತಾರು ವಸಂತಗಳನ್ನು ಕಳೆದು ತೊಂಬತ್ತೇಳನೇ ವಸಂತಕ್ಕೆ ಅಡಿ ಇಡುತ್ತಿರುವ ಈ ಸನ್ನಿವೇಶದಲ್ಲಿ ಬಹಳ ಮಂದಿ ಪೂಜ್ಯ ಮಠಾಧೀಶ್ವರರು, ರಾಜ್ಯಮಟ್ಟದ ನಾಯಕರು, ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವ ಗಣ್ಯ ನಾಯಕರು, ಶ್ರೀ ಕ್ಷೇತ್ರದ ಅಭಿಮಾನಿಗಳು, ಸದ್ಭಕ್ತ ಮಹಾಶಯರು, ಎಲ್ಲ ವರ್ಗದ ಜನರು ಸಮಾವೇಶಗೊಂಡಿರುವ ಈ ಮಂಗಳ ಮಹೂರ್ತವು ಚಿರಸ್ಮರಣೀಯ ಹಾಗೂ ಇತಿಹಾಸದಲ್ಲಿ ದಾಖಲಿಸತಕ್ಕದ್ದಾಗಿದೆ. ಈ ಸಂದರ್ಭದಲ್ಲಿ ಕೆಲವು ವಿಷಯಗಳನ್ನು ತಮ್ಮೆಲ್ಲರ ಗಮನಕ್ಕೆ ತರುವುದು ಸೂಕ್ತವೆಂದು ಭಾವಿಸುತ್ತೇವೆ.

ಶ್ರೀ ಮಠವು ಸುಮಾರು ಹದಿನೈದನೆ ಶತಮಾನದಲ್ಲಿ ಪೂಜ್ಯ ಎಡೆಯೂರು ಶ್ರೀ ಶ್ರೀ ತೋಂಟದ ಮಹಾ ಶ್ರೀ ಸಿದ್ಧಲಿಂಗ ಸ್ವಾಮಿಗಳಿಂದ ಸ್ಥಾಪಿತವಾದುದಾಗಿರುತ್ತದೆ. ಅಂದಿನಿಂದ ಅನೇಕ ಮಂದಿ ಶಿವಯೋಗಿಗಳ ಪರಂಪರೆಯ ತಪಸ್ಸಿನ ಶಕ್ತಿಯಿಂದ ಲಿಂಗ ಶಕ್ತಿಯ ತೇಜಸ್ಸಿನಿಂದ ಮುಂದುವರಿದು ಕೊಂಡು ಬಂದಿದೆ. ಇಲ್ಲಿಗೆ ಹತ್ತೊಂಬತ್ತನೆ ಶತಮಾನದ ಕೊನೆಯ ಭಾಗದಲ್ಲಿ ಉತ್ತರ ಕರ್ನಾಟಕದಿಂದ ಶ್ರೀ ಅಟವೀಸ್ವಾಮಿಗಳು ದಯಮಾಡಿ ಸಿದ್ದರು. ಆಗ ಇಲ್ಲಿನ ಮಠಾಧಿಕಾರಿಗಳಾಗಿದ್ದ ಶ್ರೀ ರುದ್ರಸ್ವಾಮಿಗಳವರ ಅಪೇಕ್ಷೆಯಂತೆ ಇಲ್ಲಿ ಕೆಲವು ಕಾಲ ತಪೋನುಷ್ಠಾನ ಮಾಡುತ್ತಾ ಹತ್ತೊಂಬತ್ತನೂರರಲ್ಲಿ ಲಿಂಗೈಕ್ಯರಾದ ಮೇಲೆ ನಮ್ಮ ಪೂಜ್ಯ ಗುರುಗಳಾದ ಶ್ರೀ ಶ್ರೀ ಉದ್ದಾನ ಮಹಾಸ್ವಾಮಿಗಳವರು ಮಠಾಧಿಕಾರವನ್ನು ವಹಿಸಿಕೊಂಡು ಕಾರ್ಯನಿರ್ವಹಣೆ ಮಾಡುತ್ತಾ ಇದ್ದರು. ಯಾವುದೇ ವಿಧವಾದ ಭೂ ಆಸ್ತಿ ಅಥವಾ ನಿಧಿಯ ನೆರವು ಇಲ್ಲದೆ ಇದ್ದರೂ ಕೂಡ ನಮ್ಮ ಪೂಜ್ಯ ಗುರುಗಳು ೧೯೧೭ನೇ ಇಸ್ವಿಯಲ್ಲಿ ಒಂದು ಉಚಿತ ವಿದ್ಯಾರ್ಥಿ ನಿಲಯವನ್ನು ಒಂದು ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿ ಭಕ್ತಾದಿಗಳ ಮತ್ತು ಮಹಾಜನರ ಸಹಾಯದಿಂದ ನಡೆಸುತ್ತಾ ಇದ್ದರು. ಕ್ರಮ ಕ್ರಮವಾಗಿ ಸಂಸ್ಥೆಯು ಪ್ರಗತಿ ಪಥದಲ್ಲಿ ಮುಂದುವರೆಯುತ್ತಿತ್ತು. ೧೯೧೪ರಲ್ಲಿ ಪೂಜ್ಯ ಗುರುಗಳು ಲಿಂಗೈಕ್ಯರಾದ ನಂತರ ಮಠದ ಆಡಳಿತವನ್ನು ನಾವು ವಹಿಸಿಕೊಳ್ಳಬೇಕಾಯಿತು. ಅಂದಿನಿಂದ ಪರಮಾತ್ಮನ ಕೃಪೆಯಿಂದ ಕ್ಷೇತ್ರಾಧಿಪತಿ ಶ್ರೀ ಸಿದ್ಧಲಿಂಗೇಶ್ವರರ ಕರುಣೆಯಿಂದ ದಾನಿಗಳ ಮತ್ತು ಸದ್ಭಕ್ತರ ಸಹಾಯದಿಂದ ಕ್ರಮ ಕ್ರಮವಾಗಿ ಬೆಳವಣಿಗೆಯನ್ನು ಹೊಂದಿ ಸುಮಾರು ೧೦೦ ಮಂದಿ ಮಕ್ಕಳಿಂದ ಆರಂಭವಾದ ಈ ಸಂಸ್ಥೆಯು ಈ ದಿವಸ ೭೫೦೦ ಮಂದಿ ಅನಾಥ ಮಕ್ಕಳ ಮತ್ತು ಬಡ ಮಕ್ಕಳಿಗೆ ಆಶ್ರಯವನ್ನು ನೀಡಲಾಗುತ್ತಿದೆ. ಪ್ರಾಥಮಿಕ ಹಂತದಿಂದ ಕಾಲೇಜು ಹಂತದವರೆಗೆ ೧೨೫ ವಿದ್ಯಾಸಂಸ್ಥೆಗಳನ್ನು ನಡೆಸುತ್ತಾ ಇದೆ. ಈ ಸಂಸ್ಥೆಯು ಪ್ರಾರಂಭವಾದ ದಿನದಿಂದಲೂ ಜಾತ್ಯತೀತ ಸಂಸ್ಥೆಯಾಗಿ – ಎಲ್ಲಾ ಸಮಾಜಗಳ ಮಕ್ಕಳಿಗೆ ಆಶ್ರಯವನ್ನು ನೀಡುತ್ತಾ ಇದೆ. ಬಹಳ ಮಕ್ಕಳು ದೀನ ದರಿದ್ರ ಕುಟುಂಬಗಳಿಂದ ಬಂದಿರತಕ್ಕವರು. ಶ್ರೀ ಕ್ಷೇತ್ರದಲ್ಲಿ ಜಾತಿ, ಕುಲ, ಭೇದ ಮೊದಲಾದ ಪೂರ್ವಾಗ್ರಹಗಳಿಲ್ಲದೆ ಅತ್ಯಂತ ಪ್ರೀತಿ ವಿಶ್ವಾಸಗಳಿಂದ ಬೆಳೆಯುತ್ತಿರುವುದು. ಅವು ನಕ್ಕು ನಲಿದಾಡುತ್ತಿರುವುದು ವಿವಿಧ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರು ವುದು ನಮಗೆ ಅತ್ಯಂತ ಆನಂದವನ್ನುಂಟು ಮಾಡುತ್ತದೆ. ಇದಕ್ಕಿಂತ ಬೇರೊಂದು ಸೇವೆ ಉಂಟೆ ಎನ್ನುವ ಯೋಚನೆಯು ಬರುತ್ತಿದೆ. ಭಾವೈಕ್ಯತೆಯ ಸಹ ಚಿತ್ರವು ದೈವೀ ಭಾವನೆಯ ಸ್ವರೂಪದರ್ಶನವನ್ನುಂಟು ಮಾಡುತ್ತದೆ.



ಸನ್ಮಾನಿತರ ಪರವಾಗಿ ಡಾ. ಎಸ್.ಜೆ. ನಾಗಲೋಟಿಮಠ ಅವರಿಂದ ಕೃತಜ್ಞತಾ ನುಡಿಗಳು

ಜಗತ್ತಿನ ಇತಿಹಾಸದಲ್ಲಿ ಇಪ್ಪತ್ತೊಂದನೆ ಶತಮಾನವು ಒಂದು ಮಹತ್ತರವಾದ ಅವಧಿಯಾಗಿದೆ. ಮಾನವನ ಬೌದ್ಧಿಕ ಪ್ರಗತಿಯ ಫಲವಾಗಿ ಲಭ್ಯವಾಗಿರುವ ವಿಜ್ಞಾನವು ಮಾನವನಿಗೆ ಮಹಾ ಶಕ್ತಿಯನ್ನು ಕೊಟ್ಟಿರುತ್ತದೆ. ಮಾನವನು ಅಸಾಧ್ಯವಾದುದೇನೂ ಇಲ್ಲ. ತಾನು ಸರ್ವ ಸಮರ್ಥನೆಂದು ಘೋಷಿಸುವ ಕಾಲವಾಗಿದೆ. ಪ್ರಪಂಚವೆಲ್ಲ ಸಂಕೋಚವಾಗಿ ಪ್ರತ್ಯೇಕ ಭಾವನೆಗಳು ಅಳಿಸಿಹೋಗಿವೆ. ಜಗತ್ತಿನ ಜನತೆಗಳೆಲ್ಲವೂ ಜಾತಿ ಕುಲ ದೇಶ ಭಾಷೆಗಳೆಂಬ ಕಂದರಗಳನ್ನು ಮೀರಿ ಒಟ್ಟಾಗಿ ಬಾಳುವ ಕಾಲವಿದಾಗಿದೆ. ವಿಜ್ಞಾನದ ಪ್ರಗತಿಯಿಂದಾಗಿ ಮಾನವನು ಸುಖವಾಗಿ ಸಮೃದ್ಧಿಯಾಗಿ ಬಾಳ್ವಿಕೆ ಮಾಡಲು ಎಲ್ಲ ಸೌಲಭ್ಯಗಳೂ ಲಭ್ಯವಾಗುತ್ತಾ ಇವೆ. ಪ್ರಪಂಚವು ಸ್ವರ್ಗ ಸುಖವನ್ನನುಭವಿಸುವ ಸ್ಥಳವನ್ನಾಗಿ ಪರಿವರ್ತನೆಯಾಗಿರುವುದೆನ್ನುವ ಕಲ್ಪನೆಯು ವ್ಯಾಪಕವಾಗಿರುವಂತೆ ತೋರುತ್ತದೆ.

ಈ ಜಗತ್ತಿನ ಬಾಹ್ಯ ಸ್ವರೂಪದರ್ಶನದಿಂದ ಸಂತೃಪ್ತನಾಗಿ ಹೆಮ್ಮೆಪಡುತ್ತಿರುವಾಗ ಪ್ರಚಲಿತವಿರುವ ಸಮಾಜದ ಸಹಜ ಚಿತ್ರವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವು ನಡೆಯ ಬೇಕಾಗಿದೆ. ಕೋಟ್ಯಂತರ







ಪೂಜ್ಯ ಶ್ರೀಗಳವರಿಂದ ಶ್ರೀ ಷಣ್ಮುಖ ಶಿವಯೋಗಿ ಸಂಸ್ಥಾನ ಮಠದ ಶ್ರೀಗಳವರಿಗೆ ಗೌರವ ಸಮರ್ಪಣೆ

ಜನಗಳು ಅತ್ಯವಶ್ಯಕವಾದ ಜೀವನ ಸೌಕರ್ಯಗಳಿಲ್ಲದೆ ನಿಕೃಷ್ಟವಾದ ಜೀವನವನ್ನು ಸಾಗಿಸುತ್ತಿರುವಾಗ, ಭಯಂಕರ ಮಾರಕಾಸ್ತ್ರಗಳ ತಯಾರಿಕೆಗೆ ಗಣನೀಯವಾದ ಹಣವನ್ನು ಖರ್ಚು ಮಾಡುತ್ತಿರುವುದು ಯಾವ ಪ್ರಗತಿ? ಕೋಟ್ಯಂತರ ಜನಗಳು ಅತ್ಯಂತ ನಿಕೃಷ್ಟವಾದ ಪರಿಸ್ಥಿತಿಯಲ್ಲಿ ಕಷ್ಟಪಡುತ್ತಿರುವಾಗ ಕೆಲವೇ ಮಂದಿ ವೈಭವದ ಆಡಂಬರದ ಜೀವನವನ್ನು ಸಾಗಿಸುತ್ತಿರುವುದು ಯಾವ ನ್ಯಾಯ? ದುರ್ಬಲ ವರ್ಗದವರ ಮುಗ್ಧ ಜನಗಳ ಶೋಷಣೆಯು ಅವ್ಯಾಹತವಾಗಿ ನಡೆಯುತ್ತಾ ಇರುವುದು ಯಾವ ನಾಗರೀಕತೆ? ಆಗಾಗ್ಗೆ ಯುದ್ಧಗಳು, ಮಹಾ ಯುದ್ಧಗಳು ನಡೆದು ಅಪಾರವಾದ ಭೌತಿಕ ಸಂಪತ್ತಿನ ವಿನಾಶ, ಲಕ್ಷಾಂತರ ಜನಗಳ ಕಗ್ಗೊಲೆಯಾಗುತ್ತಿರುವುದು ಮಾನವೀಯತೆಯ ಮಹಾ ಸಂಹಾರವಲ್ಲವೇ? ಯುದ್ಧವೆಂದು ಕರೆಯದೆ ಇದ್ದರೂ ಮನೆ ಮನೆಯಲ್ಲಿ, ಹಳ್ಳಿ ಹಳ್ಳಿಗಳಲ್ಲಿ ಪಟ್ಟಣ ಪಟ್ಟಣಗಳಲ್ಲಿ ಸರ್ವತ್ರ ವ್ಯಾಪಕವಾಗಿ ನಡೆಯುತ್ತಿರುವ ಸಮಾಜ ಜೀವನದಲ್ಲಿ ಶಾಂತಿ ನೆಮ್ಮದಿಯನ್ನು ಕಾಣುವುದು ಹೇಗೆ ಸಾಧ್ಯ? ಅಂತೆಯೇ ಇಂತಹ ಅನಿಷ್ಟ ವಾತಾವರಣವು ಪರಿಹಾರವಾಗಿ ಜಗತ್ತನ್ನು ಶಾಂತಿ ಸಾಮ್ರಾಜ್ಯವನ್ನಾಗಿ ಪರಿವರ್ತಿಸುವ ಮಾರ್ಗವನ್ನು ಕಂಡುಕೊಳ್ಳಬೇಕಾಗಿದೆ. ಈ ಮಹತ್ತರವಾದ ಗುರಿಯನ್ನು ಸಾಧಿಸಬೇಕಾದರೆ ಧರ್ಮದ ಸಂದೇಶ ಅಗತ್ಯವೆನಿಸುತ್ತದೆ. ಧರ್ಮವೆಂದರೆ ಯಾವುದೇ ಸಂಕುಚಿತ ಭಾವನೆಯನ್ನು ಹೊಂದಬೇಕಾಗಿಲ್ಲ. ಧರ್ಮವೆಂದರೆ ಮಾನವಧರ್ಮ ಅಂದರೆ, ಮನುಷ್ಯನು ಮನುಷ್ಯನಾಗಿಯೇ ಬಾಳುವ ಜೀವನ ಕಲೆಯೆಂದು ಅರ್ಥೈಸ ಬೇಕಾಗುತ್ತದೆ. ನಿಜಧರ್ಮದ ಆಚರಣೆಯು ಇಂದಿನ ವಿಜ್ಞಾನ ಯುಗಕ್ಕೆ ಸಲ್ಲದೆಂಬ ಮಾತಿನಲ್ಲಿ ಸತ್ಯವಿಲ್ಲ. ಸತ್ಯದ ಅತ್ಯುನ್ನತವಾದ ಒರೆಗಲ್ಲು ಧರ್ಮ ಎಂದು ಧರ್ಮವನ್ನು ವೈಜ್ಞಾನಿಕ ಮನೋಧರ್ಮದಿಂದ ನೋಡುವ ದೃಷ್ಟಿಯು ವ್ಯಾಪಕವಾಗಬೇಕಾಗಿದೆ. ಮನುಷ್ಯನ ಅನುಭವ ಬೆಳೆದಂತೆ ಜೀವನ ಹೆಚ್ಚು ಹೆಚ್ಚು ವ್ಯಾಪಕವಾದಂತೆ, ಸನ್ನಿವೇಶ ಬದಲಾವಣೆ ಯಾದಂತೆ, ಹೊಸ ಹೊಸ ಸನ್ನಿವೇಶಗಳಿಗನುಗುಣವಾಗಿ ಧರ್ಮವು ಹೊಂದಿಕೊಳ್ಳಬೇಕಾಗುತ್ತದೆ. ಅಂತೆಯೇ Religious leaders should make every effrot to have religion to keep step with advances in scientific and moral understanding ಎಂದು ಜೋಸೆ ಹೇಳುವ ಮಾತನ್ನು ಸ್ಮರಿಸಬೇಕಾಗಿದೆ. ಧರ್ಮ ಮತ್ತು ವಿಜ್ಞಾನಗಳು ಪರಸ್ಪರ ಪೋಷಕವೆನ್ನುವ ಅಭಿಪ್ರಾಯವನ್ನು Einstein ರವರು ಸಮರ್ಥನೆ ಮಾಡಿದ್ದಾರೆ. Science without religion is lame Religion without Science is blind ಎನ್ನುವ ಅವರ ಅಭಿಪ್ರಾಯವು ಎರಡರ ಸಮನ್ವಯವನ್ನು ಒತ್ತಿ ಹೇಳುತ್ತದೆ. ವಿಜ್ಞಾನವು ಮಾನವನಿಗೆ ಮಹಾಶಕ್ತಿಯನ್ನು ಕೊಟ್ಟಿದೆ. ಈ ಶಕ್ತಿಯು ದುರುಪಯೋಗವಾಗಿ ಜಗತ್ತಿನ ಹಾಗೂ ಮನುಕುಲ ಸರ್ವನಾಶವಾಗದಂತೆ ನೋಡಿಕೊಳ್ಳಬೇಕು ಮತ್ತು ವಿಜ್ಞಾನವನ್ನು ಮನುಕುಲದ ಕಲ್ಯಾಣಕ್ಕಾಗಿ ಉಪಯೋಗ ಮಾಡಿಕೊಳ್ಳುವ ಮಾರ್ಗವನ್ನು ಧರ್ಮವು ಬೋಧಿಸುತ್ತದೆ. Science caters to the physical needs of man and Religion caters to the higher needs such as love goodness, truth and Justice.

ಭಾರತೀಯ ಸಂಸ್ಕೃತಿಯ ಬೋಧಿಸುವ Spiritualised Society ಎನ್ನುವ ತತ್ವವು ಎಲ್ಲ ಸಮಸ್ಯೆಗಳಿಗೂ ಸಮಂಜಸವಾದ ಮಾರ್ಗವನ್ನು ಸೂಚಿಸುತ್ತದೆ ಹಾಗೂ ಗುರು ಅರವಿಂದರ ಈ ಸಂದೇಶದಲ್ಲಿ ಸ್ಪಷ್ಟೀಕರಿಸಲ್ಪಟ್ಟಿದೆ. Politics, Society, Economy are in the first form of human life simply an arrangement by which men collectively can live, produce,



satisfy their desire, enjoy, progress in bodily, vital and mental efficiency; but the spiritual aim makes them much more than this, first, a framework of life within which man can seek for and grow into his real self and divinity, secondly, an increasing embodiment of the divine law of being in life, thirdly, a collective advance towards the light, power, peace, unity, harmony of the diviner nature of humanity which the race is trying to evolve.

ಈಶಾವಾಸ್ಯೋಪನಿಷತ್ತಿನ ವಿದ್ಯಾ ಮತ್ತು ಅವಿದ್ಯೆಯ ಸಮನ್ವಯ ಸಿದ್ಧಾಂತವನ್ನು ಇಲ್ಲಿ ಸ್ಮರಿಸಬೇಕಾಗಿದೆ.

''ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್'' ಎನ್ನುವ ಭಾರತೀಯ ದೈವೀವಾಣಿಯು ಶ್ರೀ ಬಸವೇಶ್ವರರ ಇವನಾರವ ಇವನಾರವ ಇವನಾರವ ಎನ್ನದೇ ಇವನಮ್ಮವ ಇವನಮ್ಮವ ಎನ್ನುವ ಮನೋಭಾವನೆಯನ್ನು ಅಳವಡಿಸ ಬೇಕಾಗುತ್ತದೆ.

ಆಧುನಿಕ ಯುಗ ದ್ರಷ್ಟಾರರಾದ ರವೀಂದ್ರನಾಥ ಠಾಗೋರರವರು ವಿವಿಧ ಧರ್ಮಗಳಲ್ಲಿ ವಿವಿಧ ಸಂಸ್ಕೃತಿಗಳಲ್ಲಿ ವಿವಿಧ ಮಾನವ ವಂಶಗಳಲ್ಲಿ ಸಾಮಂಜಸ್ಯವನ್ನು ಸೌಹಾರ್ದವನ್ನು ವಿಶ್ವಕುಟುಂಬ ಭಾವನೆಯನ್ನು ಪೋಷಿಸುವ ಹಾಗೂ ವಿಶ್ವಮಾನವೀಯತೆಯನ್ನು ವಿಕಾಸ ಮಾಡುವ ಕಾರ್ಯವನ್ನು ಪರಮಾತ್ಮನು ಭಾರತಕ್ಕೆ ಒಪ್ಪಿಸಿರುವನು ಎಂದು ಘೋಷಿಸಿರುವರು. ಈ ತರದ ವಿಶ್ವಬಂಧುತ್ವವನ್ನು ಈ ದೇಶದಲ್ಲಿ ವಿಕಾಸಗೊಳಿಸಿ ಜಗತ್ತಿನ ಮುಂದೆ ಬಂದು ಆದರ್ಶವನ್ನು ಇಡುವ ಕರ್ತವ್ಯ ಭಾರತೀಯನದು ಎಂದು ಅವರ ಆದೇಶ.

ಈ ಮಹಾಧ್ಯೇಯವು ಸಾಧಿತವಾಗ ಬೇಕಾದರೆ ನಮ್ಮ ದೇಶದ ಧರ್ಮಗುರುಗಳು, ಮಠಾಧಿಪತಿಗಳು, ಸಂತರು, ಹೆಚ್ಚಿನ ಗಮನವನ್ನು ಹರಿಸಬೇಕಾಗಿದೆ. ರಾಷ್ಟ್ರ ಪುರುಷನು ಅಭಿವೃದ್ಧಿ ಯಾಗಬೇಕು ಎನ್ನುವ ಮಾತು ಸತ್ಯವಾಗ ಬೇಕಾದರೆ ವ್ಯಕ್ತಿ ಜೀವನದಲ್ಲಿ ಹೇಗೆ ಅಂತರಂಗ ಬಹಿರಂಗಗಳ ಪೂರ್ಣ ಬೆಳವಣಿಗೆಯೇ ಪರಿಪಕ್ವತೆಯೆಂದು ಹೇಳುತ್ತಾರೋ ಅದೇ ರೀತಿಯಾಗಿ ರಾಷ್ಟ್ರ ಪುರುಷನ ಬಾಹ್ಯ ಸ್ವರೂಪವೂ (ಇಂದು ಕಾಣುತ್ತಿರುವ ಭೌತಿಕ ಪ್ರಗತಿ) ಅಂತರಂಗದ ಸುಸಂಸ್ಕೃತಿಯೂ ಕೂಡಿ ಬೆಳವಣಿಗೆಯಾಗ ಬೇಕಾಗಿದೆ. ಧರ್ಮಗುರು ಗಳು ತಮ್ಮ ವ್ಯಕ್ತಿತ್ವವನ್ನು ವಿಕಾಸಗೊಳಿಸಿ ಕೊಂಡು ಲೋಕಸಂಗ್ರಹ ಕಾರ್ಯದಲ್ಲಿ ತೊಡಗಿಸಿ ಕೊಂಡು ರಾಷ್ಟ್ರ ಪುರುಷನನ್ನು ರೂಪುಗೊಳಿಸ ಬೇಕಾಗಿದೆ. ಆತ್ಮಾವಲೋಕನ ಮಾಡಿಕೊಳ್ಳುವ ಪ್ರಯತ್ನ ಮಾಡಿದಾಗ ದೀರ್ಘಾವಧಿಯ ಆಯುಸ್ಸನ್ನು ಪರಮಾತ್ಮನು ಕೊಟ್ಟಿದ್ದರೂ ಜನತೆಯ ಬಾಹ್ಯ ಜೀವನದ ಸುಧಾರಣೆಯ ಕಾರ್ಯವು ಕೊಂಚ ಮಟ್ಟಿಗೆ ಆಗಿದ್ದರೂ ಸಮಯಾಭಾವದಿಂದ ಆತ್ಮೀಯ ಸಂಪತ್ತು ಸಾಕಷ್ಟು ಬೆಳವಣಿಗೆಯಾಗಿಲ್ಲವೆಂದು ಭಾವಿಸುತ್ತೇವೆ. ಪ್ರಯುಕ್ತ ಪರಮಾತ್ಮನು ಎಷ್ಟು ಕಾಲ ಆಯುಸ್ಸನ್ನು ಪ್ರಸಾದಿಸುವನೋ ಆ ಕಾಲವನ್ನು ಅಂತರಂಗದ ಅರಳುವಿಕೆಗಾಗಿ ಬಳಸಬೇಕೆಂಬ ನಮ್ಮ ಅಭಿಪ್ರಾಯವನ್ನು ಜನತೆಗೆ ತಿಳಿಸ ಬಯಸುತ್ತೇವೆ.

ಈ ಸಂದರ್ಭದಲ್ಲಿ ಮತ್ತೊಂದು ಮಾತನ್ನು ಜನತೆಗೆ ತಿಳಿಸಲಾಶಿಸುತ್ತೇವೆ. ರಾಷ್ಟ್ರದುದ್ದಗಲದಲ್ಲಿ ಚುನಾವಣೆಗಳು ಬಂದು ನಿಂತಿವೆ. ಈ ಮಹತ್ವದ ಸಂದರ್ಭದಲ್ಲಿ ಮತದಾರರು ನೈತಿಕತೆಯನ್ನು ಕಾಪಾಡಿಕೊಳ್ಳ ಬೇಕಾಗಿದೆ. ಯಾವುದೇ ಆಶೆ, ಆಮಿಷ, ಪ್ರಲೋಭನೆಗಳಿಗೆ ಒಳಗಾಗದೆ ತಮ್ಮ ಮತವನ್ನು ಪ್ರತಿಭಾಸಂಪನ್ನ, ಪ್ರಾಮಾಣಿಕ ರಾಷ್ಟ್ರಪ್ರೇಮಿಗಳಾದ ಅಭ್ಯರ್ಥಿಗಳಿಗೆ ನೀಡುವ ಪವಿತ್ರ ಕೈಂಕರ್ಯದಲ್ಲಿ ತೊಡಗಬೇಕಾಗಿದೆ.





ಸರ್ವರಿಗೂ ಸಮಪಾಲು, ಸಮಬಾಳುವೆ ಲಭ್ಯವಾಗಿ ನೆಮ್ಮದಿಯ ಬದುಕು ಲಭಿಸಲಿ, ದೈವಭಕ್ತಿಯು ವಿಕಾಸವಾಗಿ ಧರ್ಮಬುದ್ಧಿಯು ಜಾಗೃತವಾಗಿ ಮನಪಕ್ವವಾಗಿ ಮಾನವೀಯ ಮೌಲ್ಯಗಳು ಮಂಗಳಪ್ರದವಾಗಿ ಬೆಳಗಲಿ, ''ಸರ್ವೇ ಜನಾಃ ಸುಖಿನೋಭವಂತು'' ಎನ್ನುವ ತತ್ವವು ದೈನಂದಿನ ಜೀವನದಲ್ಲಿ ಆಚರಿತವಾಗಲಿ. ಇಂತಹ ಮಹಾಭಾಗ್ಯವನ್ನು ಕರುಣಿಸಲೆಂದು ದೇವರನ್ನು ಪ್ರಾರ್ಥಿಸಿ ನಮ್ಮ ಮಾತನ್ನು ಮುಕ್ತಾಯ ಮಾಡುತ್ತೇವೆ'' ಎಂದು ಪೂಜ್ಯ ಶ್ರೀ ಶ್ರೀಗಳವರು ತಿಳಿಸಿದರು.

ಕಾರ್ಯಕ್ರಮ ಕುಮಾರಿ ಅನುರೂಪ ಅವರ ಪ್ರಾರ್ಥನೆ ಯೊಂದಿಗೆ ಪ್ರಾರಂಭ ವಾಯಿತು. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ಸಂಜುಂಡಪ್ಪ ಅವರು ಸ್ವಾಗತಿಸಿದರು. ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯ ಅವರು ಕಾರ್ಯಕ್ರಮದ ನಿರೂಪಣೆ ಮಾಡಿದರು.

### ಸಾಹಿತ್ಯ ಸಮ್ಮೇಳನ

ಮಧ್ಯಾಹ್ನ ನಡೆದ ಸಾಹಿತ್ಯ ಸಮ್ಮೇಳನವನ್ನು ಅಂತರಾಷ್ಟ್ರೀಯ ಖ್ಯಾತ ವೈದ್ಯರಾದ ಡಾ. ಎಸ್.ಜೆ. ನಾಗಲೋಟಿಮಠ ಅವರು ಉದ್ಘಾಟಿಸಿದರು. ಮತ್ತು ಶಿವಯೋಗಮಂದಿರದ ಶ್ರೀ ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು ರಚಿಸಿದ್ದ 'ಶಿವಪೂಜಾವಿಧಿಃ' ಎಂಬ ಗ್ರಂಥದ ದ್ವಿತೀಯ ಆವೃತ್ತಿಯನ್ನು ಬಿಡುಗಡೆ ಮಾಡುತ್ತಾ, ಲಿಂಗಪೂಜೆಯ ವಿಧಾನದಲ್ಲಿ ಅಡಗಿರುವ ವೈಜ್ಞಾನಿಕ ತತ್ವವನ್ನು ಬಹುಮನೋಜ್ಞವಾಗಿ ವಿಶ್ಲೇಷಣೆ ಮಾಡಿದರು. ಹಾಗೂ ಲಿಂಗಪೂಜೆಯ ಅಂಗಗಳಾದ ವಿಭೂತಿಧಾರಣೆ, ಬಿಲ್ವ ಪತ್ರಧಾರಣೆ, ಧ್ಯಾನ ಮುಂತಾದವುಗಳನ್ನು ಆಚರಿಸುವುದರಿಂದ ದೇಹದ ಮೇಲಾಗುವ ವೈಜ್ಞಾನಿಕ ಪರಿಣಾಮಗಳನ್ನು ವಿವರಿಸಿದರು.

ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧಾನಾಲಯದಲ್ಲಿ ಸಂಶೋಧಕರಾಗಿರುವ ಶ್ರೀ ಜಗನ್ನಾಥ ಅವರು ಸಂಸ್ಕೃತಕ್ಕೆ ಅನುವಾದಿಸಿರುವ ಬಸವಣ್ಣನವರ ವಚನ ಸಂಕಲನವಾದ 'ವೀಚಿಮಾಲಿಕಾ' ಎಂಬ ಗ್ರಂಥವನ್ನು ಪ್ರೊ. ಎನ್. ಬಸವಾರಾಧ್ಯರವರು ಬಿಡುಗಡೆ ಮಾಡಿದರು. ಅನುವಾದಕ್ಕೆ ಮೂಲ ಪ್ರೇರಣೆ ಮತ್ತು ಉದ್ದೇಶಗಳನ್ನು ಕುರಿತು ಶ್ರೀ ಜಗನ್ನಾಥ ಅವರು ತಿಳಿಸಿದರು.




ಸಚಿವ ಶ್ರೀ ಹೆಚ್.ಎಂ. ರೇವಣ್ಣ ಅವರಿಂದ ಉಪನ್ಯಾಸ

ಶ್ರೀ ಕೋ.ರಂ. ಬಸವರಾಜು ಬರೆದ ''ಶ್ರೀ ಸಿದ್ಧಗಂಗಾ ಶಿವಗುರು ಶ್ರೀ ಶಿವಕುಮಾರ ಪ್ರಭುವೇ'' ಎಂಬ ಕೃತಿಯನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಮಲ್ಲೇಪುರ ಜಿ. ವೆಂಕಟೇಶ್ ಅವರು ಬಿಡುಗಡೆ ಮಾಡುತ್ತಾ, ಈ ಕೃತಿ ಆತ್ಮಸೌಂದರ್ಯದಿಂದ ಕೂಡಿದ್ದು ಅನುಸಂಧಾನ ಯೋಗ್ಯವಾಗಿದೆ. ಈ ಕೃತಿಯನ್ನು ಓದುತ್ತಾ ಹೋದಂತೆ ಪರಮಪೂಜ್ಯ ಶ್ರೀಗಳವರ ಘನ ವ್ಯಕ್ತಿತ್ವ ನಮ್ಮ ಮುಂದೆ ಅನಾವರಣಗೊಳ್ಳುತ್ತದೆ ಎಂದರಲ್ಲದೆ, ತನಗೆ ಆಶ್ರಯಕೊಟ್ಟು ತನ್ನ ಭವಿಷ್ಯವನ್ನು ರೂಪಿಸಿದ ಪರಮಪೂಜ್ಯರನ್ನು ಮನದುಂಬಿ ನೆನೆದರು. ಪ್ರೊ. ಎನ್. ಬಸವಾರಾಧ್ಯರು ಅಧ್ಯಕ್ಷತೆ ವಹಿಸಿದ್ದರು. ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಯವರ ಆಶೀರ್ವಚನ ನೀಡಿದರು. ಡಾ. ಬಿ. ನಂಜುಂಡಸ್ವಾಮಿ ಸ್ವಾಗತಿದರು. ಪ್ರಾಂಶುಪಾಲರಾದ ಶ್ರೀ ಪಿ.ಎನ್. ಚಂದ್ರಶೇಖರಯ್ಯ ನವರು ಧನ್ಯವಾದಗಳನ್ನು ಅರ್ಪಿಸಿದರು. ಶ್ರೀ ಕೆ. ಬಸವರಾಜು ಕಾರ್ಯಕ್ರಮವನ್ನು ನಿರೂಪಿಸಿದರು.

★

### ಶ್ರೀವಾಣಿ

*ರಾಷ್ಟ್ರದಲ್ಲಿಂದು ಆರ್ಥಿಕವಾಗಿ ಬಡತನವಿರಬಹುದು. ಅದನ್ನು ಶ್ರಮ ದುಡಿಮೆಯಿಂದ ಅಭಿವೃದ್ಧಿಪಡಿಸಿಕೊಳ್ಳಬಹುದು. ಆದರೆ ಹೃದಯ ದಾರಿದ್ರ್ಯವಿರಬಾರದು. ದೊಡ್ಡಸ್ಥಾನಗಳಲ್ಲಿರುವವರು ದೊಡ್ಡ ದೃಷ್ಟಿಯುಳ್ಳವರಾಗಬೇಕು. ಉದಾತ್ತ ಚಿಂತಕರಾಗಬೇಕು. ಅಧಿಕಾರ, ಅಂತಸ್ತು, ಅವಕಾಶಗಳು ಬಂದಾಗ ಹಿರಿಯ ಮಾರ್ಗಾವಲಂಬಿಗಳಾಗಿ ಮುನ್ನಡೆಯಬೇಕು.*



## ವಚನಗಳ ವಿಶ್ಲೇಷಣೆ

– ಸಂ. ಡಾ. ಎಲ್. ಬಸವರಾಜು
ವಿಶ್ರಾಂತ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

*ಹೊನ್ನಿನೊಳಗೊಂದೊರೆಯ*
*ಸೀರೆಯೊಳಗೊಂದೆಳೆಯ*
*ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ*
*ನಿಮ್ಮಾಣೆ ನಿಮ್ಮ ಪ್ರಮಥರಾಣೆ*
*ನಿಮ್ಮ ಶರಣರಿಗಲ್ಲದೆ ಮತ್ತೊಂದಕ್ಕೆ ಮಾಡೆನು*
*ಕೂಡಲಸಂಗಮದೇವ*

ಸಂಗ್ರಹಿಸದಷ್ಟೂ ದಾಹ, ಅನುಭವಿಸಿದಷ್ಟೂ ಆಶೆ, ತುಪ್ಪವನ್ನು ಸುರಿದಷ್ಟೂ ಅಗ್ನಿಜ್ವಾಲೆ! ಈ ತುಪ್ಪ ಸುರಿಯುವುದನ್ನು ನಿಲ್ಲಿಸುವುದೊಂದೇ, ಜ್ವಾಲೆಯನ್ನು ನಂದಿಸಲಿರುವ ಒಂದೇ ಒಂದು ಮಾರ್ಗ. ಹಾಗೆಯೇ, ಸ್ವಾರ್ಥಸುಖಕ್ಕಾಗಿ, ಇಂದಿಗಿರಲಿ ನಾಳೆಗಿರಲೆಂದು, ಅವಶ್ಯಕವಾದುದಕ್ಕಿಂತ ಅಧಿಕವಾಗಿ ಧನ-ಕನಕ-ಧಾನ್ಯ-ವಸ್ತ್ರಗಳನ್ನು ಮುಚ್ಚಿಡುವುದೇ ಅಭಾವ ಹಾಹಾಕಾರಗಳಿಗೆಲ್ಲಾ ಮೂಲ ಕಾರಣ. ಎಲ್ಲರೂ ಬಳಸುವುದಕ್ಕಿಲ್ಲದಿರುವಾಗ, ಎಲ್ಲವನ್ನು ಮುಚ್ಚಿಡುವ ವಿಪರ್ಯಾಸಕ್ಕೆ ಕಾರಣ ಸ್ವಂತ-ಸುಖ-ತೃಪ್ತಿ. ಆದುದರಿಂದಲೇ ಬಸವಣ್ಣನವರು ಸರ್ವರ ಸುಖಕ್ಕಲ್ಲದೆ ಸ್ವಸುಖಕ್ಕಾಗಿ ಏನನ್ನೂ ಮಾಡೆನೆಂದಿರುವರು.

ಅನುದಿನದ ಕಾಯಕದಿಂದ ಆರ್ಜಿಸಿ ತಂದುದರಿಂದಲೇ ಜಂಗಮಸೇವೆ ಮತ್ತು ಸ್ವಸೇವೆ ಮಾಡಲು ಅನುವಿರುವಾಗ, ಹೊನ್ನು ವಸ್ತ್ರಗಳನ್ನು ಪರರ ಕಣ್ ತಪ್ಪಿಸಿ ಮುಚ್ಚಿಡುವುದು ಮಹಾ ದ್ರೋಹವೆನಿಸೀತು!

*ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು!*
*ನಾನು ವ್ಯವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು!*
*ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು*
*ನಾನಾವ ಕರ್ಮಂಗಳ ಮಾಡಿದರೆಯೂ*
*ಆ ಕರ್ಮಫಲಭೋಗವ ನೀ ಕೊಡುವೆಯೆಂಬುದ ನಾ ಬಲ್ಲೆನು!*
*ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನು!*
*ನಿಮ್ಮ ಸೊಮ್ಮಿಂಗೆ ಸಲಿಸುವೆನು,*
*ನಿಮ್ಮಾಣೆ ಕೂಡಲಸಂಗಮದೇವ!*

ನಾನು ವ್ಯವಸಾಯ ಮಾಡಲಿ, ವ್ಯಾಪಾರ ಮಾಡಲಿ, ಅನ್ಯರ ಮನೆಯಲ್ಲಿ ಆಳಾಗಿ ದುಡಿಯಲಿ, ನನ್ನ ದುಡಿಮೆಯೆಲ್ಲ ಗುರು-ಲಿಂಗ-ಜಂಗಮದಾಸೋಹಕ್ಕಾಗಿಯೇ. ಆದುದರಿಂದ ಯಾವ ವಿಧವಾದ ದುಡಿಮೆಯನ್ನು ಮಾಡುವಲ್ಲಾಗಲಿ ಮಾನಾಪಮಾನದ ಪ್ರಶ್ನೆಯೇ ಬರುವುದಿಲ್ಲ. ಮತ್ತೆ ಮಾನವನು ಮಾಡುವ ಆ ಸಕಲ ವಿಧವಾದ ಕರ್ಮಗಳಿಗೂ ಪ್ರತಿಫಲವನ್ನು ಕೊಡುವನಾದರೂ ಯಾರು? ದೇವರೊಬ್ಬನೇ! ಆದುದರಿಂದ ಮೇಲು ಕೀಳೆನ್ನದೆ ನಾನು ಯಾವ ಕಾಯಕವನ್ನಾದರೂ ಮಾಡಲು ಸಿದ್ಧ. ಮೇಲಾಗಿ ಶಿವನಿಂದ ಬಂದ ಆದಾಯವನ್ನು ಶಿವಬಂಧವಾದುದಕ್ಕೆ ವ್ಯಯಮಾಡುವೆನೇ ಹೊರತು ಮತ್ತೊಂದಕ್ಕಿಲ್ಲ. ಹೀಗೆ ನನ್ನ ಜೀವನೋಪಾಯ ಶುದ್ಧವಾಗಿದೆ. ನನ್ನ ಜೀವನಾದಾಯವೂ ಶಿವಾರ್ಪಿತವಾಗಿದೆ. ನನಗಿನ್ನಾವಕರ್ಮಬಂಧವೂ ಇಲ್ಲ – ಎನ್ನುವರು ಕರ್ಮಯೋಗಿ ಬಸವಣ್ಣನವರು.

*ಎನ್ನವರೊಲಿದು*
*ಹೊನ್ನ ಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ!*
*(ಹೊಗಳತೆ) ಎನ್ನ ನಿಮ್ಮೈಗೊಂಡಿತ್ತಲ್ಲಾ*
*ಅಯ್ಯಾ ನಿಮ್ಮ ಮನ್ನಣೆಯೆ ಮಸೆದಲಗಾಗಿ (ಯೆನ್ನ) ತಾಗಿತ್ತಲ್ಲಾ !*
*ಅಯ್ಯೋ ನೊಂದೆನು ಸೈರಿಸಲಾರೆನು!*
*ಕೂಡಲಸಂಗಮದೇವ, ನೀನೆನಗೊಳ್ಳಿದನಾದರೆ,*
*ಎನ್ನ ಹೊಗಳತೆಗಡ್ಡ ಬಾರಾ ಧರ್ಮೀ !*

ಹರಿತವಾದ ಅಲಗನ್ನು ಎಸೆದರೆ, ಅದು ಒಂದು ಕಡೆಯಿಂದ ಮೈಯನ್ನು ಕೊರೆದು ಮತ್ತೊಂದು ಕಡೆ ಮರುಮೊನೆ ತೋರುವಂತೆ, ಶಿವಕೃಪೆಯೇ ತಮಗೆ ಕೂರಲಗಾಯಿತೆಂದು ಬಸವಣ್ಣನವರು ಮರುಗುವರು. ಅದು ಹೇಗೆಂದರೆ : ಶಿವಕೃಪೆಯಾದ ಮಹನೀಯನೆಂದು ಬಸವಣ್ಣನವರನ್ನು ಶಿವಶರಣರ ಸಮೂಹ ಮೆಚ್ಚಿ, ಬಗೆ ಹೆಚ್ಚಿ ಹೊಗಳಿತು. ಮೊದಮೊದಲಿಗೆ ಆ ಹೊಗಳಿಗೆ ಅವರ ಕಿವಿಗೆ ಸೋಕಿದರೂ, ಅದು ತಮ್ಮ ಬಗೆ ತಾಗದಂತೆ ಎಚ್ಚರಿಕೆವಹಿಸಿ ಚಿತ್ತಸ್ವಾಸ್ಥವನ್ನು ಕಾಪಾಡಿಕೊಂಡಿದ್ದರು. ಆದರೆ ಮಾನವನಿಗೆ ಕೀರ್ತಿಕಾಮದಷ್ಟು ಪ್ರಕರ್ಷಕವಾದ ವಿಷಯ ಮತ್ತೊಂದಿಲ್ಲವಲ್ಲಾ! ಅವರಿಗೆ ಅಪರೂಪಾದರೂ ದುರ್ಬಲವಾದ ಕೆಲವು ಘಳಿಗೆಗಳಲ್ಲಿ, ಶಿವಶರಣರ ಹೊಗಳಿಕೆ ಅವರ ಬಹಿರಂಗವನ್ನು ಭೇದಿಸಿ, ಅಂತರಂಗದ ನಿಸ್ತರಂಗಸರಸಿಯಲ್ಲಿ ತಮ್ಮ ನಂಜಿನ ಮೊನೆಯೂರಿದವು. ಆಗ ಬಸವಣ್ಣನವರು ತಮ್ಮ ಅಂತರಂಗವನ್ನು ಕಲಕಿ ಕಲುಷಿತಗೊಳಿಸುವ ಪ್ರಶಸ್ತಿಗೆ ಕಾರಣವಾದ ಶಿವನೊಲವನ್ನು ತಮ್ಮ ಆಧ್ಯಾತ್ಮಿಕಜೀವನದೆದೆಗೆ ನಾಟಿದ ಅಲಗಿಗೆ ಹೋಲಿಸಿ, ಶಿವನು ಹಿತೈಷಿಯಾದರೆ ಶರಣರ ಹೊಗಳಿಗೆ ಅಡ್ಡಬರಲೆಂದು ಬೇಡಿ ಕೊಂಡಿರುವರು.

*ಬ್ರಹ್ಮಪದವಿಯನೊಲ್ಲೆ !*
*ವಿಷ್ಣು ಪದವಿಯನೊಲ್ಲೆ :*
*ರುದ್ರಪದವಿಯನೊಲ್ಲೆ !*
*ನಾನು ಮತ್ತಾವ ಪದವಿಯನೊಲ್ಲೆನಯ್ಯ !*
*ಕೂಡಲಸಂಗಮದೇವ*
*ನಿಮ್ಮ ಸದ್ಭಕ್ತರ ಪಾದವನರಿದಿಪ್ಪ*
*ಮಹಾಪದವಿಯನೆ ಕರುಣಿಸಯ್ಯ!*

ಸದ್ಭಕ್ತರ ಪಾದಸೇವೆಗಿಂತ ಪವಿತ್ರವಾದುದೆನಿಸಲಿಲ್ಲ ಬ್ರಹ್ಮ-ವಿಷ್ಣು-ರುದ್ರ ಪದವಿಗಳು ಬಸವಣ್ಣನವರಿಗೆ. ಅವರು ನಿಜವಾದ ಮಣ್ಣಿನ ಮಗ. ಎಲ್ಲ ದಿವ್ಯಪದವಿಗಳನ್ನೂ ಇಹದಲ್ಲೇ ಕಂಡುಕೊಂಡರು. ಸಜ್ಜನರ ಸೇವೆಯಲ್ಲೇ ಹೆಜ್ಜೇನಿನ ಸವಿಯನ್ನು ಕಂಡುಂಡರು.

*(ಕೃಪೆ : ಬಸವ ವಚನಾಮೃತ)*







## ಪಾಶ್ಚಿಮಾತ್ಯ ವಿದ್ವಾಂಸರ ದೃಷ್ಟಿಯಲ್ಲಿ ಬಸವಣ್ಣನವರು

– ಡಾ. ಎಸ್.ಆರ್. ಗುಂಜಾಳ
ನಿರ್ದೇಶಕರು,
ಲಿಂಗಾಯತ ಸಂಶೋಧನ ಕೇಂದ್ರ, ಗ್ರಂಥಾಲಯ,
ಬೆಳಗಾವಿ.

ಬಸವಣ್ಣನವರು ಹುಟ್ಟಿ ಬರಲು, ಕ್ರಾಂತಿಯನ್ನು ಎಸಗಲು ಅಂದಿನ ಸಾಮಾಜಿಕ, ಧಾರ್ಮಿಕ, ರಾಜಕೀಯ – ಮುಂತಾದ ಕ್ಷೇತ್ರಗಳಲ್ಲಿ ಉಂಟಾಗಿದ್ದ ಕಲುಷಿತ ಪರಿಸ್ಥಿತಿಯೇ ಕಾರಣವೆಂದು ಹೇಳಬಹುದು. ಸಾಮಾಜಿಕ ಕ್ಷೇತ್ರದಲ್ಲಿ ಅಸ್ಪೃಶ್ಯರ ಸ್ಥಿತಿಯು ನೊಣ-ಸೊರಜು, ನಾಯಿ-ಹಂದಿಗಳಿಗಿಂತಲೂ ಕೀಳಾಗಿತ್ತು. ಅವರದು ಉಚ್ಚ ವರ್ಗದವರ ಮಲಮೂತ್ರ ಹೊತ್ತೊಯ್ಯುವುದು, ಸತ್ತ ಪ್ರಾಣಿಗಳನ್ನು ಎತ್ತಿ ಚೆಲ್ಲುವುದು ಮುಖ್ಯ ಉದ್ಯೋಗವಾಗಿತ್ತು. ಅವರ ಸ್ವಚ್ಛಗೊಳಿಸುವ ಈ ಕಾರ್ಯಕ್ಕೆ ಉಚ್ಚ ವರ್ಗದವರು ತಾವು ಉಂಡು ಉಳಿದ ಹಳಸಿದ ಬೋನವನ್ನು ಪ್ರತಿಫಲವೆಂದು ನೀಡುತ್ತಿದ್ದರು. ಸ್ಮಶಾನದಲ್ಲಿ ಚೆಲ್ಲಿದ ಬೋಕಿಗಳನ್ನು, ಹೆಣದ ಮೇಲಿನ ಬಟ್ಟೆಗಳನ್ನು ಮಾತ್ರ ಉಪಯೋಗಿಸುವ ಹಕ್ಕು ಪಡೆದಿದ್ದರು. ಅವರಿಗೆ ಹೊಲ ಕೊಳ್ಳುವ, ಮನೆ ಕಟ್ಟಿಸಿಕೊಳ್ಳುವ, ಓದು-ಬರಹ ಕಲಿಯುವ ಯಾವ ಹಕ್ಕೂ ಇರಲಿಲ್ಲ.

ಅಸ್ಪೃಶ್ಯರ ಗತಿ ಇಂತಿದ್ದರೆ ಸ್ತ್ರೀಯರ ಗತಿ ಇನ್ನೂ ಅಧೋಗತಿಯಲ್ಲಿತ್ತು. ತಾಯಿ, ಸತಿ ಸಹೋದರಿ, ತನುಜೆಯರೆಂದು ಕರೆಯಿಸಿಕೊಳ್ಳುವ ಸ್ತ್ರೀಯರಿಗೆ ದಾಸ್ಯತ್ವ ಬಿಟ್ಟರೆ ಬೇರೆ ಗತಿಯಿರಲಿಲ್ಲ. ಅಜ್ಞ ಬಾಲೆಯರಿಗೆ ಮದುವೆ ಮಾಡುತ್ತಿದ್ದರು. ಆಕೆಯ ಪತಿ ಕುಂಟ, ಕುರುಡ, ಹುಚ್ಚ, ಮುದುಕನಿರಬಹುದು. ಆಕೆಗೆ ವಿದ್ಯೆಕಲಿಯುವುದಾಗಲೀ, ಆಸ್ತಿಯ ಹಕ್ಕಾಗಲಿ ಇರಲಿಲ್ಲ. ಬಾಲ್ಯದಲ್ಲಿ ತಂದೆಯ ಅಧೀನದಲ್ಲಿ, ಯೌವನದಲ್ಲಿ ಗಂಡನ ಅಧೀನದಲ್ಲಿ ಮುಪ್ಪಿನಲ್ಲಿ ಮಗನ ಅಧೀನದಲ್ಲಿ ದಾಸಿಯಾಗಿ ಜೀವಾಂತ್ಯದವರೆಗೆ ಇರಬೇಕಾಗಿತ್ತು. ಅಂತೆಯೇ ಮನುಧರ್ಮದಲ್ಲಿ 'ಸ್ತ್ರೀ ಸ್ವಾತಂತ್ರ್ಯಂ ನ ಅರ್ಹತಿ' ಸ್ತ್ರೀಸ್ವಾತಂತ್ರ್ಯಕ್ಕೆ ಅರ್ಹಳಲ್ಲವೆಂದು ಹೇಳಲ್ಪಟ್ಟಿದೆ. ಹೀಗೆ ಇಡೀ ಹಿಂದೂ ಸಮಾಜದ ಬಹುಸಂಖ್ಯಾತ ಜನರ ಸಾಮಾಜಿಕ ಸ್ಥಿತಿ ಅತ್ಯಂತ ಹೀನಾಯವಾಗಿತ್ತು.

೧೨ನೆಯ ಶತಮಾನದಲ್ಲಿ ಇಂಥ ಪುರೋಹಿತಶಾಹಿ ಜನರ ಅಧಿಕಾರ, ದೌರ್ಜನ್ಯ, ಕಂದಾಚಾರ, ಮೂಢನಂಬಿಕೆ– ಇವುಗಳಿಗೆ ಜನಸಾಮಾನ್ಯರೆಲ್ಲ ಪಕ್ಕಾಗಿದ್ದರು. ಜರ್ಜತರಾಗಿ ಹೋಗಿದ್ದರು. ನಾಶದ ಅಂಚಿನಲ್ಲಿದ್ದರು. ಆಗ ಅವರ ಆಶಾಕಿರಣವಾಗಿ, ಭಾಗ್ಯ ಸೂರ್ಯನಾಗಿ, ಶಾಂತಿದೂತನಾಗಿ ಬಸವೇಶ್ವರರು ಹುಟ್ಟಿಬಂದರು. ಅವರ ಸರ್ವತೋಮುಖ ಏಳಿಗೆಗಾಗಿ ತನ್ನ ಕೊನೆಯ ಉಸಿರಿನವರೆಗೆ ದಿಟ್ಟತನದಿಂದ ಧೈರ್ಯದಿಂದ ಹೋರಾಡಿದರು. ಅವರ ಹೋರಾಟದಲ್ಲಿ ಅಸ್ಪೃಶ್ಯರು, ಹಿಂದುಳಿದವರು, ಬಿದ್ದವರು, ವಿಚಾರವಂತ ಕ್ಷತ್ರಿಯರು, ಪ್ರಜ್ಞಾವಂತ ಬ್ರಾಹ್ಮಣರು ಬೃಹತ್ ಸಂಖ್ಯೆಯಲ್ಲಿ ಪಾಲುಗೊಂಡರು. ಸಮಗ್ರ ಸಮಾಜದ ಸರ್ವೋದಯ ಕಾರ್ಯದಲ್ಲಿ ಮನಃಪೂರ್ವಕವಾಗಿ ಭಾಗವಹಿಸಿದರು. ಬಸವೇಶ್ವರರ ಸಮರ್ಥ ನೇತೃತ್ವದಲ್ಲಿ ಬೃಹತ್ ಸಂಖ್ಯೆಯ ಶರಣರು ಹೊಸ ಸಮಾಜ ನಿರ್ಮಾಣ ಮಾಡಿದರು. ಇದೇ ಸಮಯಕ್ಕೆ ಅನೇಕ ಸನಾತನಿಗಳು, ಪುರೋಹಿತರು ತಮ್ಮ ಸ್ವಾರ್ಥ ಸಾಧನೆಗೆ ಇದು ಅಡ್ಡಿ-ಆತಂಕಗಳನ್ನು ಒಡ್ಡುತ್ತದೆಯೆಂದು ಬಗೆದು ಶರಣ ಸಮಾಜಕ್ಕೆ ವಿರೋಧಿಗಳಾಗಿ ನಿಂತರು. ಅಂದಿನಿಂದ ಇಂದಿನವರೆಗೂ ಈ ವಿರೋಧ ನಿರಂತರವಾಗಿ ನಡೆದು ಬಂದಿದೆ.

### *ಬಸವಕ್ರಾಂತಿ*

ಬಸವಣ್ಣನವರ ತಾತ್ವಿಕ, ಸಾಮಾಜಿಕ, ಧಾರ್ಮಿಕ ವಿಚಾರಗಳಿಗೆ ಒಪ್ಪದ ಅಂದಿನ ಜಾತಿವಾದಿಗಳು, ಸನಾತನವಾದಿಗಳು ಅವರ ವಿರೋಧವಾಗಿ ಸಮರವನ್ನೇ ಸಾರಿದರು. ಬಿಜ್ಜಳರಾಯನ ಸಹಾಯದಿಂದ ಬಸವಾದಿ ಶರಣರ ಹತ್ಯೆ ಮಾಡಲು ಹೊಂಚು ಹಾಕಿದರು. ಪೂರ್ವಾಶ್ರಮದಲ್ಲಿ ಬ್ರಾಹ್ಮಣನಾಗಿದ್ದ ಮಧುವರಸನ ಮಗಳನ್ನು ಪೂರ್ವಾಶ್ರಮದಲ್ಲಿ ಅಸ್ಪೃಶ್ಯನಾಗಿದ್ದ ಹರಳಯ್ಯನ ಮಗನಿಗೆ ವೀರಶೈವ ದೀಕ್ಷೆ ಕೊಟ್ಟು ಮದುವೆ ಮಾಡಿದ ಘಟನೆಯನ್ನೇ ಮೂಲಕಾರಣವನ್ನಾಗಿ ಮುಂದಿಟ್ಟುಕೊಂಡು ಅರಸನಲ್ಲಿ ಮೊರೆಯಿಟ್ಟರು. ವಿಲೋಮ ಪದ್ಧತಿಯ ಈ ಮದುವೆ ಹಿಂದೂ ಧರ್ಮದ ಮೂಲ ತತ್ವಕ್ಕೆ ವಿರೋಧವಾಗಿದೆಯೆಂದೂ ಇದರಿಂದ ದೇಶಕ್ಕೆ ಅನಾಹುತ ತಪ್ಪಿದ್ದಲ್ಲವೆಂದೂ ಹೇಳಿ ಅರಸನ ಮನಸ್ಸನ್ನು ಕಲುಷಿತಗೊಳಿಸಿದರು. ಮನುಧರ್ಮಶಾಸ್ತ್ರದಲ್ಲಿ ನಿರೂಪಿಸಿದಂತೆ ಮಧುವರಸ ಮತ್ತು ಹರಳಯ್ಯಗಳಿಗೆ ಮರಣದಂಡನೆ ಕೊಡಬೇಕೆಂದು ಒತ್ತಾಯಿಸಿದರು. ಬಿಜ್ಜಳರಾಯನು ಸನಾತನಿಗಳ ಒತ್ತಾಯಕ್ಕೆ ಮಣಿದು ಅವರಿಗೆ ದೇಹಾಂತ ಶಿಕ್ಷೆಯನ್ನು ಕೊಟ್ಟನು. ಇದರಿಂದ ಕಲ್ಯಾಣದಲ್ಲಿ ಕ್ಷೋಭೆಯುಂಟಾಯಿತು. ಸೈನಿಕರಿಂದ ಅಗಣಿತ ಶರಣರ ಹತ್ಯೆಯಾಯಿತು. ಅಳಿದುಳಿದ ಶರಣರು ತಮ್ಮ

ಹೊಸ ಸಮಾಜ ರಚನೆಗೆ ಕಾರಣವಾಗಿದ್ದ ವಚನಗಳನ್ನು ಜೊತೆಗೆ ತೆಗೆದುಕೊಂಡು ಹಳ್ಳಿಗಾಡನ್ನು ಸೇರಿದರು.

*ಗುಪ್ತನಿಧಿ*

ಸಮಾಜದಲ್ಲಿ ಪ್ರೀತಿ ಸಹೋದರತೆ, ಸಮಾನತೆಗಳನ್ನು ಬಿತ್ತರಿಸುವ ಈ ಶರಣ ಸಾಹಿತ್ಯ ಗುಪ್ತವಾಗಿಡಲ್ಪಟ್ಟಿತು. ಮುಂದೆ ಸುಮಾರು ೩೦೦ ವರುಷಗಳ ವಿಜಯನಗರದ ಅರಸರ ಕಾಲಕ್ಕೆ ನೂರೊಂದು ವಿರಕ್ತರೂ, ತೋಂಟದ ಸಿದ್ಧಲಿಂಗಯತಿಗಳ ಶಿಷ್ಯ ಪ್ರಶಿಷ್ಯರೂ ಗುಪ್ತನಿಧಿಯಾಗಿದ್ದ ವಚನ ವಾಙ್ಮಯವನ್ನು ಹೊರತೆಗೆದು ಸಂಗ್ರಹಿಸಿದರು. ಫ.ಗು. ಹಳಕಟ್ಟಿಯವರು ೧೮೯೬ ರಿಂದ ೧೯೨೧ರವರೆಗಿನ ೨೫ ವರುಷಗಳ ಅವಧಿಯಲ್ಲಿ ಬಸವಾದಿ ಶರಣರ ವಚನಗ್ರಂಥಗಳ ಸಂಶೋಧನೆ ಮಾಡಿದ್ದರು.

ಹಳಕಟ್ಟಿಯವರ ಪ್ರಯತ್ನದ ಫಲವಾಗಿ ವಚನ ಸಾಹಿತ್ಯ ಬೆಳಕಿಗೆ ಬಂದಿತು. ವಚನಗಳ ಪ್ರಕಟಣೆಯೊಂದಿಗೆ ಬಸವಣ್ಣನವರ ವರ್ಣಮಯ ಜೀವನ ಚರಿತ್ರೆಯ ಮೇಲೆ ದೇಶ-ವಿದೇಶಗಳ ಸಂಶೋಧಕರು ಹೊಸ ಹೊಸ ವಿಚಾರಗಳನ್ನು ವ್ಯಕ್ತಪಡಿಸಿ ಸಾವಿರಾರು ಗ್ರಂಥಗಳನ್ನು ಇಪ್ಪತ್ತನೆಯ ಶತಮಾನದಲ್ಲಿ ಪ್ರಕಟಿಸಿರುವರು.

ಪಾಶ್ಚಾತ್ಯ ಬರಹಗಾರರಲ್ಲಿ ಮೊಟ್ಟ ಮೊದಲು ವೀರಶೈವರ ಬಗೆಗೆ ಉಲ್ಲೇಖ ಮಾಡಿದವನು ಡಚ್ ಕ್ರಿಸ್ತ ಧರ್ಮೋಪದೇಶಕನಾದ ಅಬ್ರಾಹಮ್ ರೊಗೇರಿ. ಆವನು ಬರೆದ ''ದಿ ಓಪನ್ ಡೋರು ಟು ದಿ ಹಿಡನ್ ಪಾಗ್ಯಾನಿಸಮ್'' ಎಂಬ ಗ್ರಂಥವು ೧೬೫೧ರಲ್ಲಿ ಪ್ರಕಟವಾಗಿದೆ. ಅದರಲ್ಲಿ ವೀರಶೈವರು ಈಶ್ವರನಲ್ಲಿ ನಿಷ್ಠಾಭಕ್ತಿಯುಳ್ಳವರು. ಅವರು ತಮ್ಮ ದೇವರಾದ ಲಿಂಗವನ್ನು ಕೊರಳಲ್ಲಿ ಕಟ್ಟಿಕೊಳ್ಳುವರು. ಮಾಂಸಾಹಾರಿಗಳಲ್ಲವೆಂದು ಹೇಳಿರುವನು. ಇವನ ನಂತರ ವೀರಶೈವರನ್ನು ಕುರಿತು ಉಲ್ಲೇಖ ಮಾಡಿದವನ ಹೆಸರು ಪಿಟ್ರೊ ಡೆಲ್ಲಾವಲ್ಲೆ. ಇವನು ಇಟಲಿ ದೇಶದ ಪ್ರವಾಸಿ ೧೬ನೇ ಶತಮಾನದ ಆದಿಯಲ್ಲಿ ದಕ್ಷಿಣ ಭಾರತದಲ್ಲಿ ಪ್ರವಾಸ ಮಾಡಿ ಅವನು ಬರೆದ ಪತ್ರಗಳು ಅವನು ಕಾಲವಾದ ಹತ್ತು ವರುಷಗಳ ನಂತರ (೧೬೬೩) ಪ್ರಕಟವಾದವು. ಇವನು ವೀರಶೈವ ಧರ್ಮವು ಇಕ್ಕೇರಿ ಅರಸರ ರಾಜಧರ್ಮವಾಗಿತ್ತೆಂದು (ಸ್ಟೇಟ್ ರಿಲಿಜನ್) ಹೇಳಿದ್ದಾನೆ. ವೀರಶೈವ ಜಂಗಮರ ಹಾಗೂ ಸಮಾಧಿಕ್ರಿಯೆಗಳ ಬಗೆಗೆ ವಿಶೇಷ ವಿವರಗಳನ್ನು ಬರೆದಿರುವನು. ವೀರಶೈವರ ಬಗೆಗೆ ಬರೆದ ಮೂರನೆಯ ವ್ಯಕ್ತಿ ಕ್ರಿಸ್ತಪಾದ್ರಿ ಅಬೆ ಡುಬಾಯ (೧೭೬೨). ಇವನು ಲಿಂಗಾಯತರ ಬಗೆಗೆ ಅನೇಕ ರೋಚಕ ವಿಷಯಗಳನ್ನು ಹೇಳಿರುವನಾದರೂ ಅವು ಬಹಳಷ್ಟು ಪ್ರಮಾಣದಲ್ಲಿ ನಂಬಲರ್ಹವಾಗಿಲ್ಲ.

*ಬ್ರೌನ್ ಸಾಹೇಬರು*

ಸಿ.ಪಿ. ಬ್ರೌನರು ತೆಲಗು ಪ್ರದೇಶದಲ್ಲಿ ಬ್ರಿಟಿಶ್ ಕಂಪನಿ ಸರಕಾರದ ಸೇವೆಯಲ್ಲಿದ್ದ ವಿದ್ವಾಂಸರು. ಜಿಲ್ಲಾ ನ್ಯಾಯಾಧೀಶರಾಗಿ ಕೆಲವು ವರುಷ ಸೇವೆ ಸಲ್ಲಿಸಿದ್ದರು. ತೆಲುಗು ಭಾಷಾ ನಿಘಂಟನ್ನು ಸಿದ್ಧಪಡಿಸಿದ ಕೀರ್ತಿ ಅವರದು. ತೆಲುಗು ವ್ಯಾಕರಣ ಗ್ರಂಥವನ್ನು ಬರೆದ ಮೊದಲಿಗರು. ಅನೇಕ ಪ್ರಾಚೀನ ತೆಲುಗು ಗ್ರಂಥಗಳನ್ನು ಸಂಸ್ಕರಿಸಿ ಮೊಟ್ಟಮೊದಲಿಗೆ ಮುದ್ರಿಸಿ ಪ್ರಕಟಿಸಿದರು. ಕರ್ನಾಟಕದಲ್ಲಿ ರೆ.ಎಫ್. ಕಿಟಲ್ ಅವರಿಗಿರುವ ಸ್ಥಾನ ತೆಲುಗು ಪ್ರಾಂತದಲ್ಲಿ ಬ್ರೌನ್ ಸಾಹೇಬರಿಗಿದೆ.

ಅವರು ವೀರಶೈವರ ಬಗೆಗೆ ಬರೆದ ಒಂದು ಪುಟ್ಟ ಪುಸ್ತಕವು ಅನೇಕ ಮಹತ್ವದ ವಿಷಯಗಳನ್ನೊಳಗೊಂಡಿದೆ. ಅದರ ಹೆಸರು 'ಜಂಗಮರ ಮತ, ಆಚಾರಗಳು ಮತ್ತು ಸಾಹಿತ್ಯ ಕುರಿತು ಪ್ರಬಂಧ' ಎಂದಿದೆ. ಇದು ೧೮೪೦ರಲ್ಲಿ ಪ್ರಥಮ ಸಲ ಮುದ್ರಣಗೊಂಡಿದ್ದು ಎರಡನೆಯ ಆವೃತ್ತಿಯನ್ನು ಮದ್ರಾಸಿನ ಹಿಗಿನ್ ಬಾಥೆಮ್ಸ್ ಸಂಸ್ಥೆ ಮುದ್ರಿಸಿ ೧೮೯೭ರಲ್ಲಿ ಪ್ರಕಟಿಸಿದೆ. ಇದರಲ್ಲಿ ಅವರು ಬಸವೇಶ್ವರ ಹಾಗು ವೀರಶೈವ ಧರ್ಮದ ಬಗೆಗೆ ಮಹತ್ವಪೂರ್ಣ ವಿಚಾರಗಳನ್ನು ಬರೆದಿರುವರು.

''ಈ ಧರ್ಮದ ಸಂಕ್ಷೇಪವಾದ ಇತಿಹಾಸವನ್ನು ಮತ್ತು ವೀರಶೈವ ಧರ್ಮದ ಇಂದಿನ ಸ್ಥಿತಿಯನ್ನು ಅರಿತುಕೊಳ್ಳುವಲ್ಲಿ ಸಹಾಯವಾಗುತ್ತದೆ. ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ರಚಿತವಾದ ಕಾವ್ಯಗಳಲ್ಲಿ ಇದು ಸಾಕಷ್ಟು ವರ್ಣಿಸಲ್ಪಟ್ಟಿದೆ. ಅವುಗಳಲ್ಲಿ ಅತಿರಂಜಿತ ವರ್ಣನೆಗಳನ್ನು ಹೊರತುಪಡಿಸಿ ನೋಡಿದರೆ ಜಂಗಮರ (ವೀರಶೈವರ) ಮತವು ಬಸವೇಶ್ವರನಿಂದ ಸ್ಥಾಪಿಸಲ್ಪಟ್ಟಿರುವುದಾಗಿ ಕಂಡುಬರುತ್ತದೆ. ವೀರಶೈವರು ಅವನನ್ನು ತಮ್ಮ ಒಬ್ಬನೇ ಒಬ್ಬ ದೈವನಾಗಿರುವನೆಂದು ಗೌರವಿಸುತ್ತಾರೆ. ಅವನು ಶಿವನ ಅವತಾರವೆಂದೂ, ತಮ್ಮ ಧರ್ಮದ ದೇವರೆಂದೂ ಕಾಣುತ್ತಾರೆ.''

ಬಾಸೆಲ್ ಮಿಶನ್ನಿನ ಪ್ರೊಟೆಸ್ಟಂಟ್ ಧರ್ಮೋಪದೇಶಕನಾದ ರೆ.ಜಿ. ವುರ್ಥ ಇವರು ಭೀಮಕವಿಯ ಬಸವಪುರಾಣವನ್ನು ೧೮೫೩.ರಲ್ಲಿ ಮೊಟ್ಟಮೊದಲು ಜರ್ಮನ್ ಭಾಷೆಗೆ ಸಾರಾಂಶ ರೂಪದಲ್ಲಿ ಅನುವಾದಿಸಿದರು. ಇದರ ಪರಿಷ್ಕೃತ ಆವೃತ್ತಿಯನ್ನು ಇಂಗ್ಲೀಷ್ ಭಾಷೆಗೆ ತರ್ಜುಮೆ ಮಾಡು ಮುಂಬಯಿ ರಾಯಲ್ ಏಸಿಯಾಟಿಕ್ ಸೊಸಾಯಟಿಯ ಪತ್ರಿಕೆಯಲ್ಲಿ ೧೮೬೫ರಲ್ಲಿ ಪ್ರಕಟಿಸಿದರು. ಇವರು ಬಸವಣ್ಣನವರ ಚರಿತ್ರೆಯನ್ನು ಜರ್ಮನ್ ಮತ್ತು ಇಂಗ್ಲೀಷ್ ಭಾಷಿಕರಿಗೆ ತಿಳಿಸಿದ ಮತ್ತೊಬ್ಬ ಶ್ರೇಷ್ಠ ವಿದ್ವಾಂಸರಾಗಿರುವರು.

೧೯ನೆಯ ಶತಮಾನದ ಕೊನೆಯ ಹಾಗೂ ೨೦ನೆಯ ಶತಮಾನದ ಆದಿ ಭಾಗದಲ್ಲಿ ಆಂಗ್ಲಸರಕಾರದ ಆದೇಶದ ಮೇರೆಗೆ ಭಾರತದ ಜಿಲ್ಲಾ ಗೆಝೆಟಿಯರುಗಳನ್ನು ಸಿದ್ಧಪಡಿಸಿ ಪ್ರಕಟಿಸಲಾಯಿತು. ಇವುಗಳನ್ನು ಸಂಪಾದಿಸಿ ಪ್ರಕಟಿಸಿದ ಪಾಶ್ಚಾತ್ಯರಲ್ಲಿ ಎಡ್ಗರ ಥರ್ಸ್ಟನ್, ಬಿ.ಎಲ್. ರಾಯಸ್. ಆರ್.ಈ. ಎಂಥೋವೆನ್ ಮುಂತಾದವರನ್ನು ಹೆಸರಿಸಬಹುದು ಇವರೆಲ್ಲರೂ ಬಸವಣ್ಣನವರೇ ಲಿಂಗಾಯತ ಧರ್ಮದ ಸ್ಥಾಪಕರೆಂದು ಹೇಳಿರುವರಲ್ಲದೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಬಗೆಗೆ ವಿವರಿಸಿರುವರು. ಎನ್‌ಸಾಯಕ್ಲೊಪಿಡಿಯಾ ರಿಲಿಜನ್ ಆ್ಯಂಡ್ ಎಥಿಕ್ಸ್, ಎನ್‌ಸಾಯಕ್ಲೊಪಿಡಿಯಾ ಬ್ರಿಟಾನಿಕಾ ಮುಂತಾದ ವಿಶ್ವಕೋಶಗಳಲ್ಲೂ ಬಸವಣ್ಣನ ಬಗ್ಗೆ ಒಳ್ಳೆಯ ಅಭಿಪ್ರಾಯಗಳು ಪ್ರಕಟವಾಗಿವೆ.

ಮುಂಬಯಿಯಿಂದ ಪ್ರಕಟವಾಗುತ್ತಿರುವ ಟಾಯಿಮ್ಸ್ ಆಫ್ ಇಂಡಿಯಾ ಆಂಗ್ಲ ದಿನಪತ್ರಿಕೆಯು ಭಾರತೀಯ ಪತ್ರಿಕಾ ರಂಗದಲ್ಲಿ ಶ್ರೇಷ್ಠದರ್ಜೆಯ ಪತ್ರಿಕೆಯೆಂದು ಹೆಸರು ಮಾಡಿದೆ. ಅದು ದಿ. ೧೭.೪.೧೯೧೮ರ ಸಂಚಿಕೆಯಲ್ಲಿ ಬಸವಣ್ಣನವರನ್ನು ಭಾರತದ ಶ್ರೇಷ್ಠ ಸಮಾಜವಾದಿಯೆಂದೂ, ಸಮಾಜ ಸುಧಾರಕನೆಂದೂ ಬಣ್ಣಿಸಿದೆ. ಸರ್ ಜೇಮ್ಸ ಕ್ಯಾಟೇಲ್‌ನ ಅಭಿಪ್ರಾಯದಂತೆ – ''ಬಸವೇಶ್ವರನಕ್ಕಿಂತ ಮುಂಚಿನ ಕಾಲದಲ್ಲಿ ಹುಟ್ಟಿದ ಪ್ರತಿಯೊಬ್ಬ ಸುವಿಖ್ಯಾತ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಕರನ್ನು ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಗಳಲ್ಲಿ ಒಂದರ ಅಥವಾ ಮತ್ತೊಂದರ ಮೇಲೆ ಹೆಚ್ಚು ಒತ್ತುಕೊಟ್ಟಿರುವರು. ಇನ್ನಿತರ ಸುಧಾರಣೆಗಳಿಗೆ ಗೌಣಸ್ಥಾನವನ್ನು ಕೊಟ್ಟಿರುವರು. ಇಲ್ಲವೆ ಅವೆಲ್ಲವುಗಳನ್ನು ಸಾರಾಸಗಟಾಗಿ ನಿರ್ಲಕ್ಷಿಸಿರುವರು. ಬಸವೇಶ್ವರರು ಎಲ್ಲ ಸುಧಾರಣೆಗಳನ್ನು ಸಮಗ್ರವಾಗಿ ಕ್ರೋಢೀಕರಿಸಿದ ಮಹಾಯೋಜನೆಯನ್ನು ಸಿದ್ಧಪಡಿಸಿ ಸ್ತ್ರೀಯರ ಏಳ್ಗೆಯನ್ನು ಮತ್ತು ಸ್ವಾತಂತ್ರ್ಯವನ್ನು ಮಾರ್ಗದರ್ಶಿಯನ್ನಾಗಿಟ್ಟುಕೊಂಡು ಆ ಯೋಜನೆಯನ್ನು ಧೈರ್ಯದಿಂದ ಕಾರ್ಯಗತಗೊಳಿಸಿದರು. ಇಂದಿನ ದಿನಗಳಲ್ಲಿ ಭಾರತದ ಅನೇಕ ಸ್ಥಳಗಳಲ್ಲಿ ಸಾಮಾನ್ಯವಾಗಿ ಜರುಗುವ ಸಾಮಾಜಿಕ ವಾರ್ಷಿಕ ಸಮ್ಮೇಳನಗಳಾಗಲಿ, ಇಲ್ಲವೆ (ಬಸವೇಶ್ವರರ) ಸುಧಾರಣಾ ಯೋಜನೆಯ ಪ್ರಮುಖ ಸುಧಾರಣೆಗಳಲ್ಲಿ ಇಂದಿನ ಸಮಾಜ ಸುಧಾರಕರು ಹೆಚ್ಚಿನದೇನನ್ನೂ ಮಾಡಲಾರರು. ಭಾರತದ ಇತಿಹಾಸ, ಸಂಪ್ರದಾಯಗಳ ರೀತಿ-ನೀತಿಗಳ ವಿಶೇಷ ತಿಳಿವಳಿಕೆಗೆ ಹೆಸರಾದ ಸರ್ ಜೇಮ್ಸ್ ಕ್ಯಾಂಬೆಲ್‌ರ ಹೇಳಿಕೆಯನ್ನು ಸಂಕ್ಷೇಪಿಸಿ ಹೇಳುವುದಾದರೆ ಭಾರತದ ಇಂದಿನ ಸಮಾಜ ಸುಧಾರಕನು ಬಸವೇಶ್ವರರ ತತ್ವಗಳನ್ನೇ ಉಪದೇಶಿಸುತ್ತಲೂ ಅವರ ವಿಚಾರಗಳನ್ನೇ ಆಚಾರದಲ್ಲಿ ತರಲು ಹವಣಿಸುತ್ತಲೂ ಇದ್ದಾನೆ.''

ಬಸವಣ್ಣನವರನ್ನು ಕುರಿತು ಅತ್ಯಂತ ಸ್ಪಷ್ಟ ಅಭಿಪ್ರಾಯಗಳನ್ನು ಬಿತ್ತರಿಸಿದ ಪಾಶ್ಚಿಮಾತ್ಯರಲ್ಲಿ ಅರ್ಥರ ಮಾಯಲ್ಸನು ಶ್ರೇಷ್ಠ ಪಂಡಿನಾಗಿರುವನು. ಶೈವಧರ್ಮದ ಉಗಮ ಹಾಗೂ ವಿಕಾಸಗಳ ತವರು ಮನೆಯಾದ ಭಾರತದಲ್ಲಿ ಬಸವೇಶ್ವರರು ಒಬ್ಬರೇ ಮೊಟ್ಟಮೊದಲನೆಯ ವಿಚಾರವಾದಿ ಎಂದು ಅಭಿಪ್ರಾಯಪಟ್ಟಿರುವನು. ಅವನು ಬರೆದ 'ಲಿಂಗ ಭೂಮಿ' ಎಂಬ ಸುಪ್ರಸಿದ್ಧ ಗ್ರಂಥವು ಲಂಡನ್‌ದಿಂದ ೧೯೩೩ರಲ್ಲಿ ಪ್ರಕಟವಾಗಿದೆ. ಅದರಲ್ಲಿ ಬಸವಣ್ಣನವರನ್ನು ಕುರಿತು ಹೇಳಿದ ಮಾತುಗಳು ವಿದ್ವತ್ಪೂರ್ಣವಾಗಿವೆ.

''ಬಸವಣ್ಣನವರನ್ನು ಕುರಿತು ಪೌರಾಣಿಕ ಕಥೆ ಏನೇ ಹೇಳಲಿ: ಅವನು ಭಾರತ ದೇಶದ ಮೊಟ್ಟಮೊದಲನೆಯ ಸ್ವತಂತ್ರ ವಿಚಾರವಾದಿ ಆಗಿದ್ದನೆಂಬ ವಿಷಯ ಅತ್ಯಂತ ಸ್ಪಷ್ಟವಾಗಿದೆ. ಅವನನ್ನು ಭಾರತ ದೇಶದ ಲೂಥರನೆಂದು ಕರೆಯಬಹುದು. ಬಸವಣ್ಣನವರು ಕಾಣಿಸಿಕೊಂಡಾಗ ಪುರೋಹಿತರು ಸಮಾಜದ ನೇತಾರರಾಗಿ ರಾರಾಜಿಸುತ್ತಿದ್ದರು. ಬುದ್ಧಿವಂತಿಕೆ ಮತ್ತು ಸ್ವತಂತ್ರ ವಿಚಾರ ಶಕ್ತಿಯಿಂದ, ಜಾತೀಯತೆಯ ನಿರ್ಮೂಲನೆ ಮಾಡಲು, ಪೌರೋಹಿತ್ಯದ ಅಧಿಕಾರವನ್ನು ಕಿತ್ತೆಸೆಯಲು, ಚಳವಳಿಯೊಂದು ಅದೇ ಆಗ ಪ್ರಾರಂಭವಾಗಿತ್ತು. ಶೈವಬ್ರಾಹ್ಮಣನಾದ ಬಸವೇಶ್ವರನು ಈ ಉಗ್ರವಾದಿಗಳ ಪಕ್ಷದಲ್ಲಿದ್ದನು. ಜಾತೀಯತೆ ಮತ್ತು ಕಂದಾಚಾರಗಳನ್ನು ನಿರ್ನಾಮ ಮಾಡಲು ಉಗ್ರವಾದಿಗಳ ಪಕ್ಷದ ಹಿರಿತನವನ್ನು ವಹಿಸಿದನು. ಹುಟ್ಟಿನಿಂದ ಸಕಲರೂ ಸಮಾನರೆಂದೂ, ಪುರುಷರಷ್ಟೇ ಸ್ತ್ರೀಯರೂ ಶ್ರೇಷ್ಠರೆಂದೂ, ಬಾಲ್ಯ ವಿವಾಹವು ತಪ್ಪೆಂದೂ, ವಿಧವೆಯರಿಗೆ ಪುನರ್ವಿವಾಹ ಮಾಡಿಕೊಳ್ಳಲು ಅನುಮತಿ ಕೊಡುವುದು ಒಪ್ಪವೆಂದೂ ಬೋಧಿಸಿದನು. ಲಿಂಗಾಯತರಿಗೆಲ್ಲ ವೈಯಕ್ತಿಕ ಸ್ವಾತಂತ್ರ್ಯದ ಭರವಸೆಯಿತ್ತನು. ಇಷ್ಟಲಿಂಗಧಾರಿಗಳೆಲ್ಲರೂ ಒಂದೇಯಾಗಿದ್ದು ಸಹಪಂಕ್ತಿಭೋಜನ ಮತ್ತು ತಮ್ಮ ತಮ್ಮೊಳಗೆ ರಕ್ತಸಂಬಂಧ ಮಾಡುವುದು ಕಡ್ಡಾಯವಾಗಿತ್ತು.

ಇತ್ತೀಚಿನ ಪಾಶ್ಚಿಮಾತ್ಯ ಸಂಶೋಧಕರಲ್ಲಿ ಜೆ.ಪಿ. ಶೌಟನ್‌ರು ಪ್ರಮುಖರು. ಇವರು ನೆದರ್‌ಲ್ಯಾಂಡಿನವರು. ಕ್ರೈಸ್ತಧರ್ಮ ಮತ್ತು ಸಮಾಜಶಾಸ್ತ್ರಗಳಲ್ಲಿ ಬಲ್ಲಿದರು.

ಅವರು 'ಅನುಭಾವಿಗಳ ಕ್ರಾಂತಿ' ಎಂಬ ಉತ್ಕೃಷ್ಟ ಗ್ರಂಥವನ್ನು ಬರೆದಿರುವರು. ಇದರಲ್ಲಿ ೧. ಜಾತಿ, ೨. ಕಾಯಕ ಮತ್ತು ಆಸ್ತಿ ೩. ಸ್ತ್ರೀಯರ ಸ್ಥಾನಮಾನ, ೪. ಶಿಕ್ಷಣ ಎಂಬ ನಾಲ್ಕು ವಿಷಯಗಳನ್ನು ವಿಶ್ಲೇಷಿಸಿರುವರು. ವೀರಶೈವ ಧರ್ಮಶರಣ ಸಾಹಿತ್ಯದ ಅಭ್ಯಾಸಿಗರಿಗೆ ಅತ್ಯಂತ ಉಪಯುಕ್ತವಾದ ಗ್ರಂಥಸೂಚಿಯನ್ನು ಕೊನೆಯಲ್ಲಿ ಜೋಡಿಸಿರುವರು. ಜೇಮ್ಸಮ್ಯಾಥ್ಯೂ ಅವರಿಗೆ ವಿದ್ವಾಂಸರಾದ ಜೆ.ಎನ್. ಫರಿಕಾರ್ ಅವರು ೧೯೧೪ರಲ್ಲಿ ಎರಡು ಪತ್ರಗಳನ್ನು ಬರೆದಿರುವರು. ಇಲ್ಲಿಯವರೆಗೆ (೧೯೧೪) ಬರೆದ ಅನೇಕ ಲೇಖಕರು ವೀರಶೈವ ಧರ್ಮವನ್ನು ನಿಜವಾದ ಅರ್ಥದಲ್ಲಿ ಅರಿತುಕೊಂಡಿಲ್ಲವೆಂದು ಹೇಳಿದ ಮಾತುಗಳನ್ನು ಸ್ಮರಿಸಿಕೊಂಡಿರುವ ಶೌಟನ್‌ರು ಪ್ರಸ್ತುತ ಗ್ರಂಥದಲ್ಲಿ ವೀರಶೈವಧರ್ಮವನ್ನು ತಮ್ಮ ಆಳವಾದ ಅಭ್ಯಾಸದ ಹಿನ್ನೆಲೆಯಲ್ಲಿ ಬರೆದಿರುವರು. ಪ್ರೊ. ಟಿ.ಆರ್. ಚಂದ್ರಶೇಖರರಿಂದ ಕನ್ನಡಕ್ಕೆ ಅನುವಾದಿಸಲ್ಪಟ್ಟು ೨೦೦೦ರಲ್ಲಿ ತೋಂಟದಾರ್ಯ ಮಠದಿಂದ ಪ್ರಕಟವಾಗಿದೆ.

*ಮೂಲಕರ್ತೃ – ಬಸವಣ್ಣ*

ನಮ್ಮ ಸುತ್ತಮುತ್ತಲಿನ ಸೃಷ್ಟಿಯು ಅವ್ಯಕ್ತವಾದ ಅಗಣಿತ ಶಕ್ತಿಗಳ ಕೇಂದ್ರವಾಗಿದೆ. ಸೃಷ್ಟಿಯಲ್ಲಿಯ ಯಾವುದೊಂದು ಅವ್ಯಕ್ತಶಕ್ತಿಯನ್ನು

ವ್ಯಕ್ತರೂಪದಲ್ಲಿ ತೆರೆದು ತೋರಿಸಿದವನಿಗೆ ವಿಜ್ಞಾನಿಯೆನ್ನುತ್ತೇವೆ. ಪೃಥ್ವಿಯಲ್ಲಿ ಗುರುತ್ವಾಕರ್ಷಣ ಶಕ್ತಿಯು ಆದಿಕಾಲದಿಂದ ಅವ್ಯಕ್ತರೂಪದಲ್ಲಿತ್ತು. ಅದನ್ನು ವ್ಯಕ್ತರೂಪದಲ್ಲಿ ಪ್ರಕಟಿಸಿದವನು ವಿಜ್ಞಾನಿಯಾದ ಸರ್. ಐಸ್ಯಾಕನ್ಯೂಟನ್. ಇದೇ ರೀತಿ ಮಾನವನ ಮನೋಮಂಡಲದಲ್ಲಿ ಅನೇಕ ಅದ್ಭುತ ವಿಚಾರಗಳು ಆದಿಕಾಲ ದಿಂದಲೂ ಹುದುಗಿಕೊಂಡಿವೆ. ಅವುಗಳನ್ನು ಆಗಾಗ ಮಾನವನು ವ್ಯಕ್ತಪಡಿಸಿರಬಹುದು. ಆದರೆ ಇಂಥ ಅದ್ಭುತ ಹೊಸ ವಿಚಾರಗಳನ್ನು ಸುವ್ಯವಸ್ಥಿತವಾಗಿ ಉತ್ಕೃಷ್ಟ ರೀತಿಯಲ್ಲಿ ಇತರರ ಮನನಾಟುವಂತೆ ಯಾವನು ಪ್ರಕಟಪಡಿಸುವನೋ ಆ ವಿಚಾರಗಳ ಕರ್ತೃ ಅವನೇ ಆಗುತ್ತಾನೆ. ಈ ಮಾತನ್ನು ಕೆಳಗಿನ ಆಂಗ್ಲ ಉಕ್ತಿ ಸ್ಪಷ್ಟಪಡಿಸುತ್ತದೆ :

"Though old the thought, and of expressed,
It is his at last who says it best"
– O.S. MARDEN IN HIS BOOK PUSHING TO THE FRONT

ಬಸವಪೂರ್ವ ಯುಗದಲ್ಲಿ ಲಿಂಗ, ಗುರು, ಮಹೇಶ್ವರ, ಪಾದೋದಕ, ಗಣಾಚಾರ, ಜಂಗಮ, ಶರಣ, ಪ್ರಸಾದ, ಶಿವಾಚಾರ, ಪ್ರಾಣಲಿಂಗಿ, ಸದಾಚಾರ, ರುದ್ರಾಕ್ಷಿ, ಭೃತ್ಯಾಚಾರ, ಲಿಂಗಾಚಾರ, ಐಕ್ಯ-ಮುಂತಾದ ಶಬ್ದಗಳು ಪ್ರಾಚೀನ ಧಾರ್ಮಿಕ ಗ್ರಂಥಗಳಲ್ಲಿ ಸಾಮಾನ್ಯ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ. ಆದರೆ ಈ ಶಬ್ದಗಳಲ್ಲಿ ವಿಶಿಷ್ಟ ಅರ್ಥವನ್ನು ತುಂಬಿ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಕಟ್ಟಿನಲ್ಲಿ ಎರಕಹೊಯ್ದು ಅವುಗಳನ್ನು ವೀರಶೈವ ಎಂಬ ಹೊಸ ಧರ್ಮದ ತಳಹದಿಯಾಗಿ ಬಳಸಿಕೊಂಡದ್ದರಲ್ಲಿ ಬಸವೇಶ್ವರರ ಹಿರಿಮೆ ಅಡಗಿದೆ.

ಭಾರತೀಯ ನ್ಯಾಯಾಲಯಗಳಲ್ಲಿ ನ್ಯಾಯಾಧೀಶರು ಮತ್ತು ವಕೀಲರು ನ್ಯಾಯನಿರ್ಣಯ ಮಾಡುವಲ್ಲಿ ಕೆಲವು ಪ್ರಮುಖ ಮೂಲಗ್ರಂಥಗಳನ್ನು ಅವಲೋಕಿಸುವುದು ಬಳಕೆಯಲ್ಲಿದೆ. ಸಾಮಾಜಿಕ, ಧಾರ್ಮಿಕ ಸಮಸ್ಯೆಗಳನ್ನೊಳಗೊಂಡ ತಂಟೆ, ತಕರಾರು, ವ್ಯಾಜ್ಯಗಳನ್ನು ಸಾರಾಸಾರವಾಗಿ ವಿಚಾರಿಸಿ, ವಿಮರ್ಶಿಸಿ ತೀರ್ಪುಕೊಡುತ್ತಾರೆ. ಅಂತಹ ಹೆಸರಾಂತ ಗ್ರಂಥಗಳಲ್ಲೊಂದಾದ **"ಹಿಂದೂ ಶಾಸನ ಮತ್ತು ವಹಿವಾಟು"** ಎಂಬ ಗ್ರಂಥವನ್ನು ಪ್ರಸಿದ್ಧ ಆಂಗ್ಲ ವಿದ್ವಾಂಸ ಜಾನ್ ಡಿ. ಮೆಯ್ನ ೧೮೭೮ರಲ್ಲಿ ಬರೆದು ಪ್ರಕಟಿಸಿದ್ದಾರೆ. ೧೯೮೬ರವರೆಗೆ ೧೨ ಸಲ ಅದರ ತಿದ್ದಿದ ಆವೃತ್ತಿ ಮರು ಮುದ್ರಣಗೊಂಡಿದೆ.

**ಈ** ಗ್ರಂಥವನ್ನು ಭಾರತದ ಸರ್ವಶ್ರೇಷ್ಠ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರು ಕಾಲಕಾಲಕ್ಕೆ ಪರಿಷ್ಕರಿಸಿ ಪ್ರಕಟಿಸುತ್ತಾ ಬಂದಿದ್ದಾರೆ. ಈ ಗ್ರಂಥದ ೧೨ನೆಯ ಆವೃತ್ತಿಯನ್ನು ನಿವೃತ್ತ ನ್ಯಾಯಾಧೀಶ ಅಲ್ಲಾದಿ ಕುಪ್ಪಸ್ವಾಮಿಯವರು ಪರಿಷ್ಕರಿಸಿದ್ದು, ಹೊಸ ದಿಲ್ಲಿಯ ಭಾರತ ಲಾ ಹೌಸ್ ಪ್ರಕಾಶನ ಅದನ್ನು ಪ್ರಕಟಿಸಿದೆ. ಈ ಗ್ರಂಥವನ್ನು ಅವಲೋಕಿಸುತ್ತಿರುವಾಗ ಅದರ ಮೊದಲನೆಯ ಅಧ್ಯಾಯದ ಐದನೆಯ ಪ್ಯಾರಾದಲ್ಲಿ ಈ ಕೆಳಗಿನ ವಾಕ್ಯಗಳು ನನ್ನ ಗಮನ ಸೆಳೆದವು.

**"ಹಿಂದೂ** ಧರ್ಮಕ್ಕೆ ಏಕೈಕ ಪ್ರವಾದಿ ಇಲ್ಲ. ಅದು ಏಕಮೇವ ದೇವರನ್ನು ಪೂಜಿಸುವುದಿಲ್ಲ. ಅದು ಏಕೈಕ ಧಾರ್ಮಿಕ ವಿಧಿ-ವಿಧಾನಗಳನ್ನು ಅನುಸರಿಸುವುದಿಲ್ಲ. ನಿಜವಾಗಿ ಹೇಳುವುದಾದರೆ, ರೂಢಿ ಮೂಲಕವಾಗಿ ಬೆಳದು ಬಂದ ಯಾವುದೊಂದು ಧರ್ಮ ಅಥವಾ ಪಂಥದ ಲಕ್ಷಣಗಳನ್ನು ತೃಪ್ತಿಕರವಾಗಿ ಅದು ಹೊಂದಿದೆ ಎಂದು ಹೇಳಲಿಕ್ಕಾಗದು. ವಿಶಾಲಾರ್ಥದಲ್ಲಿ ವರ್ಣಿಸುವುದಾದರೆ ಅದೊಂದು ಜೀವನ ಕ್ರಮವೇ ಹೊರತು ಮತ್ತೇನೂ ಅಲ್ಲ.

**"ಬುದ್ಧನು** ಬೌದ್ಧಧರ್ಮ ಪ್ರಾರಂಭಿಸಿದನು. ಮಹಾವೀರನು ಜೈನಧರ್ಮವನ್ನು ಸ್ಥಾಪಿಸಿದನು. ಬಸವಣ್ಣನು ಲಿಂಗಾಯತ ಧರ್ಮದ ಸ್ಥಾಪಕನು. ಜ್ಞಾನೇಶ್ವರಿ ಮತ್ತು ತುಕಾರಾಮರು ವಾರಕರಿ ಪಂಥವನ್ನು ಪ್ರಾರಂಭಿಸಿದರು. ಗುರುನಾಯಕ ಶೀಖ್ ಧರ್ಮಕ್ಕೆ ಪ್ರೇರಣೆ ನೀಡಿದರೆ, ದಯಾನಂದ ಸರಸ್ವತಿ ಆರ್ಯ ಸಮಾಜ ಸ್ಥಾಪಿಸಿದರು. ಚೈತನ್ಯ ಭಕ್ತಿಪಂಥ ಪ್ರಾರಂಭಿಸಿದನು. ರಾಮಕೃಷ್ಣ ಪರಮಹಂಸ ಮತ್ತು ವಿವೇಕಾನಂದರ ಬೋಧನೆಯ ಪರಿಣಾಮ ವಾಗಿ ಅತ್ಯಂತ ಆಕರ್ಷಕವಾಗಿ ಪ್ರಗತಿಪರವಾಗಿ, ಕ್ರಿಯಾಶೀಲ ವಾಗಿಯೂ ಹಿಂದು ಧರ್ಮವು ಅರಳಿತು.

**ಮಾ**ಯನ್ ವಿದ್ವಾಂಸರ ಅವತರಣೆಯಲ್ಲಿ ನಾವು ಈ ಕೆಳಕಂಡ ಮೂರು ಮುಖ್ಯ ಅಂಶಗಳನ್ನು ಗಮನಿಸಬಹುದು –

೧. ಹಿಂದೂ ಧರ್ಮ ಎಂಬ ಒಂದು 'ಧರ್ಮ'ವಿಲ್ಲ ಅದೊಂದು ಜೀವನಕ್ರಮ. ಆದರೆ ಕ್ರಮಬದ್ಧ ಜೀವನಕ್ಕೆ ಅಲ್ಲಿ ಎಡೆಯಿಲ್ಲ.

೨. ಹಿಂದೂ ಜೀವನ ಕ್ರಮವನ್ನು ಪ್ರತಿಭಟಿಸಿ ಬೌದ್ಧ, ಜೈನ, ಲಿಂಗಾಯತ, ಶಿಖ್ ಧರ್ಮಗಳು ಹುಟ್ಟಿ, ಉದಾತ್ತ ತತ್ವಗಳನ್ನೊಳಗೊಂಡು ಬೆಳೆದು ಅರಳಿ ನಿಂತಿವೆ. ವಾರಕರಿ ಪಂತ, ಆರ್ಯ ಸಮಾಜ, ಭಕ್ತಿಪಂಥ, ರಾಮಕೃಷ್ಣ ಮಿಶನ್‌ಗಳೂ ಹಿಂದೂ ಜೀವನಕ್ರಮದಲ್ಲಿ ಪ್ರತ್ಯೇಕವಾಗಿ ಬೆಳೆದು ನಿಂತಿವೆ. ಇವೆಲ್ಲ ಹಿಂದೂಸ್ಥಾನ ಇಲ್ಲವೇ ಇಂಡಿಯಾದಲ್ಲಿ ಜನ್ಮ ತಾಳಿದುದರಿಂದ ಆಚಾರ-ವಿಚಾರಗಳಲ್ಲಿ ಪ್ರತ್ಯೇಕವಾಗಿದ್ದರೂ ಅವೆಲ್ಲವುಗಳನ್ನು 'ಹಿಂದೂ ಧರ್ಮ' ಎಂಬ ಒಂದೇ ಪದದಿಂದ ನಿರ್ದೇಶಿಸ ಲಾಗುತ್ತದೆ. ಆದುದರಿಂದ 'ಹಿಂದೂ ಧರ್ಮ' ಎಂಬ ಪದಕ್ಕೆ ವಿಶೇಷ ಅರ್ಥವಿಲ್ಲ.

೩. ಬೌದ್ಧಧರ್ಮ ಸ್ಥಾಪಕ ಬುದ್ಧ, ಜೈನಧರ್ಮ ಸ್ಥಾಪಕ ಮಹಾವೀರ ಹಾಗೆಯೇ ಲಿಂಗಾಯತ ಧರ್ಮಸ್ಥಾಪಕ ಬಸವಣ್ಣ ಈ ಮಾತನ್ನು ಕಹಳೆಯೋಪಾದಿಯಲ್ಲಿ ಕೂಗಿ ಹೇಳುತ್ತದೆ. ಮಾನ್ಯ ಮಾಯನ್ ವಿದ್ವಾಂಸರ ಮಾತು.

★







ಪ್ರೊ. ಹೆಚ್.ಎಸ್. ಸಿದ್ಧಗಂಗಮ್ಮ ಅವರು ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ಸಮಾಜಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ ಸೇವೆಸಲ್ಲಿಸುತ್ತಿದ್ದು ದಿನಾಂಕ **4.5.2004**ರಂದು ದೈವಾಧೀನರಾದರೆಂದು ತಿಳಿಸಲು 'ಸಿದ್ಧಗಂಗಾ' ವಿಷಾದಿಸುತ್ತೇವೆ.

ಗುಬ್ಬಿ ತಾಲ್ಲೂಕು ಹಾಲನೂರಿನಲ್ಲಿ ದಿನಾಂಕ **1.2.1948**ರಂದು ಜನಿಸಿದ ಶ್ರೀಮತಿ ಸಿದ್ಧಗಂಗಮ್ಮನವರು ದಿನಾಂಕ **6.9.1976**ರಲ್ಲಿ ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ಸಮಾಜಶಾಸ್ತ್ರ ವಿಭಾಗದಲ್ಲಿ ಉಪನ್ಯಾಸಕರಾಗಿ ವೃತ್ತಿಯನ್ನು ಪ್ರಾರಂಭಿಸಿದರು. ಪ್ರಸ್ತುತ ಅವರು ಪ್ರಾಧ್ಯಾಪಕರಾಗಿ ವಿಭಾಗದ ಮುಖ್ಯಸ್ಥರಾಗಿ ಸೇವೆಸಲ್ಲಿಸುತ್ತಿದ್ದರು.

ಸರಳತೆ ಮತ್ತು ಸಜ್ಜನಿಕೆಯನ್ನು ಮೈಗೂಡಿಸಿಕೊಂಡಿದ್ದ ಶ್ರೀಮತಿ ಸಿದ್ಧಗಂಗಮ್ಮನವರು ಸಹೋದ್ಯೋಗಿಗಳ ಮತ್ತು ವಿದ್ಯಾರ್ಥಿಗಳ ಪ್ರೀತಿಗೆ ಪಾತ್ರರಾಗಿದ್ದರು. ಅವರ ಅಕಾಲಿಕ ಮರಣ ಸಂಸ್ಥೆಗೆ ತುಂಬಲಾರದ ನಷ್ಟ. ಅವರು ಆತ್ಮಕ್ಕೆ ಶಾಂತಿಯನ್ನು ಹಾಗೂ ಅವರ ಕುಟುಂಬ ವರ್ಗದವರಿಗೆ ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ದಯಾಮಯನಾದ ಪರಶಿವ ನೀಡಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

## ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕ ಪಡೆದ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಪ್ರತಿಭಾವಂತ ವಿದ್ಯಾರ್ಥಿಗಳು



ಚಿ. ಎಸ್. ಷಣ್ಮುಖ
**98.40%**
ಸಿದ್ಧಗಂಗಾ ಪ್ರೌಢಶಾಲೆ,
ತುಮಕೂರು.



ಚಿ. ಡಿ.ಸಿ. ನಿರುಪಮ್ ಕಿಶೋರ್
**98.08%**
ಸಿದ್ಧಗಂಗಾ ಪ್ರೌಢಶಾಲೆ,
ತುಮಕೂರು.



ಚಿ. ಟಿ.ಆರ್. ಕರುಣಾಕರ
**96.80%**
ಸಿದ್ಧಗಂಗಾ ಸಿಲ್ವರ್ ಜ್ಯೂಬಿಲಿ ಹೈಸ್ಕೂಲ್,
ತುಮಕೂರು.

ನಿಧಾನವಾಗಿ ದಾರಿ ನಡೆಯಬೇಕು. ಮೆಲ್ಲಮೆಲ್ಲಗೆ ಚಿಂದಿ ಹೊದೆಯಬೇಕು. ಮೆತ್ತಮೆತ್ತಗೆ ಬೆಟ್ಟ ಹತ್ತಬೇಕು. ಸ್ವಲ್ಪಸ್ವಲ್ಪವಾಗಿ ವಿದ್ಯೆಯನ್ನು ಸಂಪಾದಿಸಬೇಕು. ಇವು ಐದನ್ನೂ ಹೀಗೆ ಸ್ವಲ್ಪ ಸ್ವಲ್ಪವಾಗಿ ಮಾಡಬೇಕು.

– ಸುಭಾಷಿತ ರತ್ನಭಾಂಡಾಗಾರ

# ಸಾಮಾಜಿಕ ಕಾರ್ಯಕರ್ತ ಶ್ರೀ ಬಸವರಾಜ ಸಿರಿಗಿರೆ

– ಪ್ರೊ. ಮಾಣಿಕರಾವ ಬಿರಾದಾರ
ಕನ್ನಡ ವಿಭಾಗ,
ಉದಯಗಿರಿ ಕಾಲೇಜು, ಉದಿಗಿರ.

ಕಲ್ಯಾಣ ನಾಡಿನಲ್ಲಿಯ ಪರಿಸರದಲ್ಲಿ ೨೧ನೆಯ ಶತಮಾನದಲ್ಲಿಯ ಶತಾಯುಷಿ ಡಾ. ಚನ್ನಬಸವಪಟ್ಟದ್ದೇವರ ವಲಯದಲ್ಲಿ ಸಾವಿರಾರು ಜನ ಬಸವಾನುಯಾಯಿಗಳು ರೂಪಗೊಂಡವರಲ್ಲಿ ಬಸವರಾಜ ಸಿರಿಗಿರೆ ಉದಗೀರ ಇವರು ಒಬ್ಬರು. ಸದ್ಗುರು ಬಸವಲಿಂಗ ಪಟ್ಟದ್ದೇವರ ಮಾರ್ಗದರ್ಶನದಲ್ಲಿ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ರಾಜ್ಯಗಳಲ್ಲಿ ಸದಾಬಸವತತ್ತ್ವಪ್ರಚಾರ ಮಾಡುತ್ತಿದ್ದಾರೆ. ಅನುಭವ ಮಂಟಪ ಕಲ್ಯಾಣ, ಹಿರೇಮಠ ಸಂಸ್ಥಾನ ಭಾಲ್ಕಿಯ ಕಾರ್ಯದಲ್ಲೂ ಉತ್ಸಾಹದಿಂದ ಪಾಲ್ಗೊಳ್ಳುತ್ತಾರೆ. ಸಿದ್ರಾಮಪ್ಪ-ಇರಮ್ಮ ಮು. ಚೌಂಡೇಶ್ವರದಲ್ಲಿ ೬೮ ವರ್ಷಗಳ ಹಿಂದೆ ಹುಟ್ಟಿ ಮರಾಠಿ ಕಲಿತು, ಉದಗೀರದಲ್ಲಿ ವ್ಯಾಪಾರ ಮಾಡಿ, ಪ್ರಪಂಚಮಾಡಿ ಪಾರಮಾರ್ಥ ಸಾಧಿಸಿ ಬಸವತತ್ತ್ವಪ್ರಚಾರದಲ್ಲಿ ತೊಡಗಿದ್ದಾರೆ.



೧. ಹಿರೇಮಠ ಸಂಸ್ಥಾನ ಭಾಲಕಿ : ಬಸವರಾಜ ಸಿರಗಿರೆಯವರು ಮಾತನಾಡುವ ದೇವ ಚನ್ನಬಸವ ಪಟ್ಟದ್ದೇವರ ಕೃಪೆಯಂತೆ ಹಾಗೂ ಬಸವಲಿಂಗ ಪಟ್ಟದೇವರ ಮಾರ್ಗ ದರ್ಶನದಲ್ಲಿ ಕಾರೆಮುಂಗಿ ಮಾಯನ ಹಳ್ಳಿ, ಸಂಗಮ್ಮ, ಡೋಣಗಾಪೂರು ಇತ್ಯಾದಿ ಕಡೆಗಳಲ್ಲಿ ಅನೇಕ ಪ್ರವಚನ ಗಳನ್ನು ಮಾಡಿದ್ದಾರೆ. ವಚನಗಳ ಆಧಾರದಿಂದ ಲಿಂಗ ಪೂಜೆ ತೋರಿಸಿ ದ್ದಾರೆ.

೨. ಶಿವಾನುಭವ ವಿಚಾರ : ದೇಗಲೂರು, ನಾಗಪೂರು, ಲಾತೂರು, ಹೈದರಾಬಾದ್ ಎಲ್ಲಾ ಕಡೆಗಳಲ್ಲಿ ಶಿವಾನುಭವ ಗೋಷ್ಠಿ, ಸಹಜ ಶಿವಯೋಗ ಪ್ರಾತ್ಯಕ್ಷಿಕೆ, ಸಾಮೂಹಿಕ ಇಷ್ಟಲಿಂಗದ ಪೂಜೆ ಮತ್ತು ಲಿಂಗದೀಕ್ಷೆಗಳನ್ನು ಮಾಡುತ್ತಾ ಸುಮಾರು ೨೫ ಸಾವಿರ ಜನರಿಗೆ ಲಿಂಗದೀಕ್ಷೆಗಳನ್ನು ಅಪ್ಪಾವರಿಂದ ಕೊಡಿಸಿದ್ದಾರೆ. ಸುಮಾರು ೮೦೦ಕ್ಕೂ ಹೆಚ್ಚು ಶಿವಾನುಭವ ಗೋಷ್ಠಿಗಳನ್ನು ಆಯೋಜಿಸಿ ಭಾಗವಹಿಸಿದ್ದಾರೆ.

ಸಾಮಾಜಿಕ ಸುಧಾರಣೆಯ ಸಾಧನ ಶಿವಾನುಭವ ಗೋಷ್ಠಿ ಈ ಮೂಲಕ ಸಾವಿರಾರು ಜನರು ದುರ್ವ್ಯಸನ, ದುರಾಚಾರದಿಂದ ದೂರಾಗಿ ಲಿಂಗಧಾರಣ ಮಾಡಿ, ಗುಟುಕಾ, ತಂಬಾಕು, ಕುಡಿತದಂತಹ ದುಷ್ಚಟ ದಿಂದ ದೂರಾಗಿದ್ದಾರೆ. ಮಹಂತ ಜೋಳಿಗೆಯಲ್ಲಿ ತುಂಬಿದ್ದಾರೆ. ಮನದ ಮೈಲಿಗೆಯನ್ನು ತೊಳೆಯಲು ಪ್ರಯತ್ನಿಸಿದ ನಿಜಶರಣ ಬಸವರಾಜ ಸಿರಿಗಿರೆ.

೩. ಪಾದಯಾತ್ರೆ : ಸಿರಗಿರೆಯವರು ಜನಸಂಪರ್ಕದ ಸಾಧನೆಗಾಗಿ ಉದಿಗಿರ – ಬಸವಕಲ್ಯಾಣ ಬಸವಕಲ್ಯಾಣ-ಗುಲಬರ್ಗಾ, ಶ್ರೀಶೈಲ ಕದಳಿವನದಲ್ಲಿ ಅಕ್ಕನಮೂರ್ತಿ ಸ್ಥಾಪನೆ, ಕದಳಿವನಯಾತ್ರೆ, ದೇಗಲೂರು-ಬಿಲ್ಲೋಲಿ-ಮದನೂರು ಭಾಗದಲ್ಲಿ ಪಾದಯಾತ್ರೆ ಮಾಡಿ ವರದಕ್ಷಿಣೆ. ಅಂಧ-ಶ್ರದ್ಧಾನಿರ್ಮೂಲನೆಗೆ ಶ್ರಮಿಸಿದ್ದಾರೆ.

೪. ಜಗಜ್ಯೋತಿ ಬಸವೇಶ್ವರರಮೂರ್ತಿ ಸ್ಥಾಪನೆ : ಸಿರಗಿರೆಯವರು, ವಿಶ್ವಗುರು ಬಸವಣ್ಣನವರ ಸ್ಮಾರಕ ಅಲ್ಲಲ್ಲಿ ನಿಲ್ಲಿಸಬೇಕೆಂದು ಸಂಕಲ್ಪಮಾಡಿ ಇಲ್ಲಿವರೆಗೆ ಸುಮಾರು ೧೦೮ ಮೂರ್ತಿಸ್ಥಾಪನೆ ಮಾಡಿದ್ದಾರೆ. ಉದಗೀರದಲ್ಲಿ ಬಸಣ್ಣನವರ ಮೂರ್ತಿ ಸ್ಥಾಪನೆ ಮಾಡಲು ಹಠಯೋಗಿಯಂತೆ ೪ ವರ್ಷ, ಕೋರ್ಟಿಗೆ ತಿರುಗಿದ್ದಾರೆ. ಕಲ್ಯಾಣದಲ್ಲಿ ಬಸವಮೂರ್ತಿ ಕಿತ್ತಾಗ ಉಪವಾಸ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಾರೆ. ಅನೇಕ ಜನರನ್ನು ಮೂರ್ತಿ ಸ್ಥಾಪಿಸಲು ಪ್ರೋತ್ಸಾಹಿಸಿದ್ದಾರೆ.

೫. ಸಭೆ-ಸಮ್ಮೇಳನಗಳ ಆಯೋಜನೆ : ಕಲ್ಯಾಣದ ಪರಿಸರದಲ್ಲಿ ಬಿರಾದಾರ, ತೊಂಡಾರೆಯವರೊಡನೆ ಕಲ್ಯಾಣ ನಾಡಿನ ಶರಣ ಪರಿಷತ್ತು ಶಿವಾನುಭವ ಶಿಬಿರ ಶರಣ ಸಮ್ಮೇಳನ, ಗಡಿನಾಡ ಕನ್ನಡ ಸಾಂಸ್ಕೃತಿಕ ಸಮ್ಮೇಳನ, ಬಸವಜ್ಯೋತಿ-ಭಾರತ ಯಾತ್ರೆಗಳಲ್ಲಿ ಸಹಭಾಗಿಯಾಗಿ ದ್ದಾರೆ. ಉದಗಿರ ಕನ್ನಡ ಸಮ್ಮೇಳನ ವ್ಯವಸ್ಥೆಮಾಡಿ ದುಡಿದು ಯಶಸ್ವಿ ಗೊಳಿಸಿದ್ದಾರೆ.

೬. ಸಂಘ-ಸಂಸ್ಥೆಗಳ ಸಂಬಂಧ : ಬಸವರಾಜ ಸಿರಗಿರೆಯವರು ಉದಗೀರದ ಪರಿಸರದಲ್ಲಿ ಅನೇಕ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳ ಬೆಳವಣಿಗೆಗೆ ಶ್ರಮವಹಿಸಿ ದುಡಿದಿದ್ದಾರೆ. ಅವುಗಳಲ್ಲಿ ಕನ್ನಡ ಸಂಘ ಉದಗೀರ, ಬಸವಜ್ಞಾನ ಸೆಂಟರ್, ವೀರಶೈವ ಸಮಾಜ ಉದಗೀರ ಗುಮಾಸ್ತರ ಸಂಘದ ಸಂಸ್ಥಾಪಕ ಅಧ್ಯಕ್ಷರು, ಶಿವಾನುಭವ ವಿಚಾರ ಮಂಚದ ಸಂಚಾಲಕರು, ವಿಶ್ವಹಿಂದುಪರಿಷತ್ತಿನ ಮಾರ್ಗದರ್ಶಕರು ಆಗಿ ಉದಗಿರ ದಲ್ಲಿ ಒಳ್ಳೆಯ ಕಾರ್ಯಕರ್ತರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಬಸವತತ್ತ್ವ ಪ್ರಚಾರ ಮಾಡಿ, ದೀಕ್ಷೆಕೊಡಿಸಿ ದುರ್ವ್ಯಸನ ದುರಾಚಾರ ದಿಂದ ದೂರಮಾಡಿದ್ದಾರೆ.

ಬಸವರಾಜ ಸಿರಿಗಿರೆಯವರು ಕಾಯಕಜೀವಿಗಳು, ಒಳ್ಳೆ ವ್ಯಾಪಾರಿ ಗಳೆಂದು ಹೆಸರು ಮಾಡಿದ್ದಾರೆ. ಇವರ ಎಲ್ಲ ಕಾರ್ಯಕ್ಕೂ ಅರ್ಧಾಂಗಿ ಶ್ರೀಮತಿ ಮಹಾದೇವಿತಾಯಿಯವರು ಸಹಕಾರ ಪ್ರೋತ್ಸಾಹ ನೀಡುತ್ತಿದ್ದಾರೆ.

★





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೨೪೬. | ಶ್ರೀ ಬಿ.ಡಿ. ತಿಪ್ಪೇಸ್ವಾಮಿ<br>ಪ್ರಾಂಶುಪಾಲರು | ೨,೦೦೧.೦೦ |
| ೧೨೪೭. | ಶ್ರೀ ಎನ್.ಸಿ. ಲಿಂಗರಾಜಪ್ಪ<br>ಉಪನ್ಯಾಸಕರು | ೨,೦೦೧.೦೦ |
| ೧೨೪೮. | ಶ್ರೀ ಎಸ್. ತಿಪ್ಪೇರುದ್ರಪ್ಪ<br>ಉಪನ್ಯಾಸಕರು | ೨,೦೦೧.೦೦ |
| ೧೨೪೯. | ಶ್ರೀ ಇ. ನಾಗೇಂದ್ರಪ್ಪ<br>ಉಪನ್ಯಾಸಕರು | ೨,೦೦೧.೦೦ |
| ೧೨೫೦. | ಶ್ರೀ ಡಿ.ಎಸ್. ಓಂಕಾರಪ್ರಸಾದ್<br>ಉಪನ್ಯಾಸಕರು | ೨,೦೦೧.೦೦ |
| ೧೨೫೧. | ಶ್ರೀ ಬಿ.ಎಂ. ಹೇಮಪ್ಪರೆಡ್ಡಿ<br>ಉಪನ್ಯಾಸಕರು | ೨,೦೦೧.೦೦ |
| | ಕ್ರ.ಸಂ. ೧೨೪೬ ರಿಂದ ೧೨೫೧ರ ವರೆಗಿನ ವಿಳಾಸ<br>ಶ್ರೀ ಬಸವೇಶ್ವರ ಪದವಿಪೂರ್ವ ಕಾಲೇಜು,<br>ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | |
| ೧೨೫೨. | ಶ್ರೀ ಬಸವರಾಜಯ್ಯ<br>ಮುನೇಶ್ವರ ಕೃಪಾ<br>ಗೋಕುಲ ಬಡಾವಣೆ,<br>ತುಮಕೂರು-೪. | ೨,೦೦೧.೦೦ |
| ೧೨೫೩. | ಶ್ರೀ ಎಚ್. ಚನ್ನಬಸವಯ್ಯ<br>ಮುಖ್ಯ ಶಿಕ್ಷಕರು,<br>ನಾಗನಹಳ್ಳಿ, ಮಾರಸಂದ್ರ ಅಂಚೆ,<br>ಕುದೂರು ಹೋಬಳಿ,<br>ಮಾಗಡಿ ತಾಲ್ಲೂಕು. | ೨,೧೦೧.೦೦ |
| ೧೨೫೪. | Sri B.C. Umesh<br>83-30, UTETOR AVE,<br>APT. 206, ELMHURST<br>NY 11373. AY, U.S.A., | ೨,೦೦೧.೦೦ |
| ೧೨೫೫. | ಶ್ರೀಮತಿ ಲಲಿತಮ್ಮ<br>೨೦೧೨, ೭ನೇ ಮುಖ್ಯರಸ್ತೆ,<br>'ಡಿ' ಬ್ಲಾಕ್, ೨ನೇ ಹಂತ,<br>ರಾಜಾಜಿನಗರ, ಬೆಂಗಳೂರು-೧೦. | ೧,೦೦೦.೦೦<br>(೧ನೇ ಕಂತು) |
| ೧೨೫೬. | ಶ್ರೀ ಜಿ. ಮಹಾಲಿಂಗಯ್ಯ<br>ಗೋಕುಲ ೬ನೇ ಕ್ರಾಸ್,<br>ಅಶೋಕನಗರ, ತುಮಕೂರು-೨. | ೫,೦೦೧.೦೦ |
| ೧೨೫೭. | ಶ್ರೀ ಜಿ. ಸುಧಾಕರಯ್ಯ<br>ಸಹ ಶಿಕ್ಷಕರು,<br>ತಿಮ್ಮನಹಳ್ಳಿ ಮತ್ತು ಅಂಚೆ,<br>ಚಿಕ್ಕನಾಯಕನಹಳ್ಳಿ ತಾಲ್ಲೂಕು,<br>ತುಮಕೂರು ಜಿಲ್ಲೆ. | ೨,೦೦೧.೦೦ |
| ೧೨೫೮. | ಶ್ರೀ ಪಿ.ಎಸ್. ಮಲ್ಲೇಶಯ್ಯ<br>ಗುರು ಮೆಡಿಕಲ್ಸ್,<br>ಜನರಲ್ ಆಸ್ಪತ್ರೆ ರಸ್ತೆ,<br>ಹೊಳೆನರಸೀಪುರ – ೫೭೩೨೧೧. | ೫,೦೦೦.೦೦ |
| ೧೨೫೯. | ಶ್ರೀ ಹೆಚ್. ಮಹಾಲಿಂಗಯ್ಯ<br>ಮುಖ್ಯ ಶಿಕ್ಷಕರು | ೨,೦೦೧.೦೦ |
| ೧೨೬೦. | ಶ್ರೀ ಆರ್. ಪ್ರಕಾಶ್<br>ಸಹ ಶಿಕ್ಷಕರು | ೨,೦೦೧.೦೦ |
| ೧೨೬೧. | ಶ್ರೀ ಜಿ.ಎಸ್. ಚಿದಾನಂದಸ್ವಾಮಿ<br>ಸಹ ಶಿಕ್ಷಕರು | ೨,೦೦೧.೦೦ |
| ೧೨೬೨. | ಶ್ರೀ ಆರ್. ಕಲ್ಲೇಶ್<br>ಸಹ ಶಿಕ್ಷಕರು | ೨,೦೦೧.೦೦ |
| ೧೨೬೩. | ಶ್ರೀ ಬಿ. ರಾಜಣ್ಣ<br>ಸಹ ಶಿಕ್ಷಕರು | ೨,೦೦೧.೦೦ |
| ೧೨೬೪. | ಶ್ರೀ ಹೆಚ್.ಎಸ್. ಈಶ್ವರಯ್ಯ<br>ದೈಹಿಕ ಶಿಕ್ಷಕರು | ೨,೦೦೧.೦೦ |
| ೧೨೬೫. | ಶ್ರೀ ಡಿ.ಸಿ. ಚನ್ನಯ್ಯ<br>ವೃತ್ತಿ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೧೨೫೯ ರಿಂದ ೧೨೬೫ರ ವರೆಗಿನ ವಿಳಾಸ<br>ಶ್ರೀ ಸ್ವಾಮಿ ವಿವೇಕಾನಂದ ಪ್ರೌಢಶಾಲೆ,<br>ಕುಪ್ಪೂರು, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. | |
| ೧೨೬೬. | ಶ್ರೀ ಜಿ.ಎಂ. ಈಶ್ವರಯ್ಯ<br>ನಂ. ೭೩೨, ಟೂಡಾ ಲೇ ಔಟ್,<br>ಶಿರಾ ಗೇಟ್,<br>ಹೆಚ್.ಎಂ.ಎಸ್. ಶಾಲೆ ಹಿಂಭಾಗ,<br>ತುಮಕೂರು. | ೨,೦೦೧.೦೦ |
| ೧೨೬೭. | ಶ್ರೀ ಎನ್. ಗಂಗರುದ್ರಪ್ಪ<br>ನಿವೃತ್ತ ಮುಖ್ಯ ಶಿಕ್ಷಕರು,<br>೮ನೇ ಮುಖ್ಯರಸ್ತೆ, ೪ನೇ ಕ್ರಾಸ್,<br>ಸೋಮೇಶ್ವರಪುರಂ,<br>ತುಮಕೂರು. | ೧,೦೦೧.೦೦<br>(೧ನೇ ಕಂತು) |
| ೧೨೬೮. | ಶ್ರೀ ಎಂ.ಜಿ. ಸುಮಂತ<br>ಎಸ್.ಜಿ. ಅನಸೂಯ ಮತ್ತು<br>ಗುರುಕುಮಾರ<br>ಕೇರಾಫ್ ಎಸ್.ಜಿ. ಮಂಜುನಾಥ<br>ರೈಸ್ ಅಂಡ್ ಫ್ಲೋರ್ ಮಿಲ್,<br>ಮಹಾಂತಿನಮಠದ ರಸ್ತೆ<br>ನೆಲಮಂಗಲ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೨೬೯. | ಶ್ರೀ ಜಿ. ಸದಾಶಿವಯ್ಯ<br>ಮುಖ್ಯ ಶಿಕ್ಷಕರು | ೪,೦೦೦.೦೦ |
| ೧೨೭೦. | ಶ್ರೀ ಕೆ. ಸತ್ಯನಾರಾಯಣ ಗುಪ್ತ<br>ಸಹ ಶಿಕ್ಷಕರು | ೧,೦೦೧.೦೦ |
| ೧೨೭೧. | ಶ್ರೀಮತಿ ಕೆ.ಎಸ್. ಲಲಿತಾಂಬ<br>ಸಹ ಶಿಕ್ಷಕರು | ೧,೦೦೦.೦೦ |
| | ಕ್ರ.ಸಂ. ೧೨೬೯ ರಿಂದ ೧೨೭೧ರ ವರೆಗಿನ ವಿಳಾಸ<br>ಬೆಳದರ ರೂರಲ್ ಹೈಸ್ಕೂಲ್,<br>ಬೆಳದರ, ತುಮಕೂರು ತಾಲ್ಲೂಕು. | |
| ೧೨೭೨. | ಶ್ರೀ ಬಿ.ಕೆ. ಪುಟ್ಟಸ್ವಾಮಯ್ಯ<br>ಉಪನ್ಯಾಸಕರು | ೨,೦೦೧.೦೦ |
| ೧೨೭೩.. | ಶ್ರೀ ಬಸವರಾಜು<br>ಉಪನ್ಯಾಸಕರು | ೨,೦೦೧.೦೦ |
| ೧೨೭೪. | ಶ್ರೀ ಎಸ್.ಬಿ. ರವೀಶ್<br>ಉಪನ್ಯಾಸಕರು | ೨,೦೦೧.೦೦ |
| ೧೨೭೫. | ಶ್ರೀ ಪುಟ್ಟರುದ್ರಯ್ಯ<br>ದ್ವಿತೀಯದರ್ಜೆ ಸಹಾಯಕರು | ೨,೦೦೧.೦೦ |
| ೧೨೭೬. | ಶ್ರೀ ಡಿ.ಎಸ್. ಶಿವಣ್ಣ<br>ಪ್ರಥಮದರ್ಜೆ ಸಹಾಯಕರು | ೨,೦೦೧.೦೦ |
| | ಕ್ರ.ಸಂ. ೧೨೭೨ ರಿಂದ ೧೨೭೬ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಸರ್ಕಾರಿ ಪದವಿಪೂರ್ವ ಕಾಲೇಜು,<br>ಹಾಲನೂರು, ತುಮಕೂರು ತಾಲ್ಲೂಕು. | |
| ೧೨೭೭. | ಶ್ರೀ ಅಡವಪ್ಪ ಬಿನ್ ನರಸೇಗೌಡ<br>ಹುಂಜನಾಳ ಅಂಚೆ ಶಿರಾ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧,೦೦೧.೦೦<br>(೧ನೇ ಕಂತು) |
| ೧೨೭೮. | ಶ್ರೀ ಎನ್. ಪುಟ್ಟಚಾರ್<br>ದೈಹಿಕ ಶಿಕ್ಷಕರು,<br>ಶ್ರೀ ರಂಗನಾಥ ಗ್ರಾಮಾಂತರ ಪ್ರಾಥಮಿಕ ಶಾಲೆ,<br>ನೇರಳಕೆರೆ, ಮಧುಗಿರಿ ತಾಲ್ಲೂಕು. | ೨,೦೦೧.೦೦ |
| ೧೨೭೯. | ಶ್ರೀ ಕೆ.ಎಸ್. ಅಡವಿಸ್ವಾಮಿ<br>ಸಹ ಶಿಕ್ಷಕರು,<br>ಸುವರ್ಣಮುಖಿ ಪ್ರೌಢಶಾಲೆ,<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು. | ೨,೦೦೧.೦೦ |
| ೧೨೮೦. | ಶ್ರೀ ಕೆ.ಆರ್. ರಮೇಶಾಚಾರ್<br>ಸಹ ಶಿಕ್ಷಕರು,<br>ಸುವರ್ಣಮುಖಿ ಪ್ರೌಢಶಾಲೆ,<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು. | ೨,೦೦೧.೦೦ |
| ೧೨೮೧. | ಶ್ರೀ ಸಿದ್ದಪ್ಪ<br>ಸಹ ಶಿಕ್ಷಕರು,<br>ಶ್ರೀ ಸುವರ್ಣಮುಖಿ ಪ್ರೌಢಶಾಲೆ,<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ. | |
| ೧೨೮೨. | ಶ್ರೀಮತಿ ಬಿ. ಕಮಲಮ್ಮ ಮತ್ತು ಮಕ್ಕಳು<br>ಕಾಫಿ ಬೆಳೆಗಾರರು, ಬೆಳಗರವಳ್ಳಿ ಎಸ್ಟೇಟ್,<br>ಬಿಕ್ಕೋಡು ಅಂಚೆ, ಬೇಲೂರು ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೦೧.೦೦<br>(೧ನೇ ಕಂತು) |
| ೧೨೮೩.. | ಶ್ರೀ ಎಚ್.ಎಂ. ಸಿದ್ದಪ್ಪ<br>ಮುಖ್ಯ ಶಿಕ್ಷಕರು,<br>ಜೆ.ಎಸ್.ಎ.ಕೆ. ಶಾಲೆ, ಚನ್ನೇನಹಳ್ಳಿ,<br>ಬೆಂ. ದಕ್ಷಿಣ ತಾ – ೫೬೦ ೧೫೦. | ೧,೦೦೧.೦೦<br>(೧ನೇ ಕಂತು) |
| ೧೨೮೪. | ಶ್ರೀಮತಿ ಲಿಂಗರಾಜಮ್ಮ ಬಿನ್<br>ಎಸ್.ಕೆ. ನಾರಾಯಣಪ್ಪ<br>ನಿವೃತ್ತತಹಸೀಲ್ದಾರರು,<br>ಸಿಗೇಹಳ್ಳಿ, ಗುಬ್ಬಿ ತಾಲ್ಲೂಕು,<br>ತುಮಕೂರು ಜಿಲ್ಲೆ. | ೨.,೫೦೧.೦೦ |
| ೧೨೮೫. | ಶ್ರೀ ಗುರುಸಿದ್ಧಪ್ಪ<br>ಶಿಕ್ಷಕರು,<br>ಹೊನ್ನವಳ್ಳಿ, ೫ನೇ ಕ್ರಾಸ್,<br>ಹೊಸಬಡಾವಣೆ, ಗುಬ್ಬಿ,<br>ತುಮಕೂರು ಜಿಲ್ಲೆ. | ೧,೦೦೧.೦೦<br>(೨ನೇ ಕಂತು) |
| ೧೨೮೬. | ಶ್ರೀ ಕೆ. ಮಲ್ಲೇಶಗೌಡ<br>ಪ್ರ.ಶಾ.ಸ. | ೧,೦೦೦.೦೦ |
| ೧೨೮೭. | ಶ್ರೀ ಕೆ. ಪುಟ್ಟಾಂಜನಯ್ಯ<br>ಸೇವಕರು | ೧,೦೦೦.೦೦ |
| ೧೨೮೮. | ಶ್ರೀ ಎಸ್.ಎ. ಕಾಳಯ್ಯ<br>ಸೇವಕರು | ೧,೦೦೦.೦೦ |
| | ಕ್ರ.ಸಂ. ೧೨೮೬ ರಿಂದ ೧೨೮೮ರ ವರೆಗಿನ ವಿಳಾಸ<br>ನಿವೇದಿತಾ ಪ್ರೌಢಶಾಲೆ,<br>ಕ್ಯಾತಸಂದ್ರ, ತುಮಕೂರು ತಾಲ್ಲೂಕು. | |
| ೧೨೮೯. | ಶ್ರೀ ಕೆ.ಎಚ್. ಪರಮಶಿವಯ್ಯ<br>ಪ್ರಾಂಶುಪಾಲರು,<br>ಶ್ರೀ ಸಿದ್ಧಗಂಗಾ ಸಂಜೆ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೦.೦೦<br>(೫ನೇ ಕಂತು) |
| ೧೨೯೦. | ಶ್ರೀ ಸಿದ್ಧಲಿಂಗಯ್ಯ<br>ಪ್ರ.ಶಾ.ಸ.<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾಲ್ಲೂಕು | ೨,೦೦೧.೦೦ |

*(ಮುಂದುವರೆಯುತ್ತದೆ)*





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೮೬೭. | ಶ್ರೀ ಜಿ. ಮೋಹನಕುಮಾರ<br>ಸಹ ಶಿಕ್ಷಕರು | ೧,೦೦೧.೦೦ |
| ೮೬೮. | ಶ್ರೀಮತಿ ಇ. ಮಮತಾ<br>ಸಹ ಶಿಕ್ಷಕರು | ೧,೦೦೧.೦೦ |
| ೮೬೯. | ಶ್ರೀ ಜಿ.ವಿ. ಶಂಕರಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೮೭೦. | ಶ್ರೀಮತಿ ಎನ್.ಆರ್. ಸರೋಜಮ್ಮ<br>ಸಹ ಶಿಕ್ಷಕರು | ೧,೦೦೧.೦೦ |
| ೮೭೧. | ಶ್ರೀಮತಿ ಬಿ.ಇ. ಉಮಾಶಂಕರ<br>ಸಹ ಶಿಕ್ಷಕರು | ೧,೦೦೧.೦೦ |
| ೮೭೨. | ಶ್ರೀಮತಿ ಟಿ. ಭಾರತಿ<br>ಸಹ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೮೬೭ ರಿಂದ ೮೭೨ರ ವಿಳಾಸಗಳು<br>ಎಸ್.ಎ.ಕೆ.ಹೆಚ್.ಪಿ.ಎಸ್., ಜೈಮಾರುತಿ ನಗರ,<br>ಬೆಂಗಳೂರು – ೫೬೦ ೦೯೬. | |
| ೮೭೩. | ಶ್ರೀ ಜಿ. ಶಿವನಂಜಯ್ಯ<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೮೭೪. | ಶ್ರೀ ಬಿ.ಎಸ್. ಪ್ರಭುದೇವ್<br>ಸಹ ಶಿಕ್ಷಕರು | ೧,೦೦೧.೦೦ |
| ೮೭೫. | ಶ್ರೀ ಕೆ.ಎನ್. ನರಸಿಂಹಮೂರ್ತಿ<br>ಸಹ ಶಿಕ್ಷಕರು | ೧,೦೦೧.೦೦ |
| ೮೭೬. | ಶ್ರೀ ಜಿ. ನಾರಾಯಣಸ್ವಾಮಿ<br>ವೃತ್ತಿ ಶಿಕ್ಷಕರು | ೧,೦೦೧.೦೦ |
| ೮೭೭. | ಶ್ರೀ ಹೆಚ್.ಆರ್. ಕೇಶವ್ ಐಯ್ಯಂಗಾರ್<br>ಪ್ರ.ಶಾ.ಸ. | ೧,೦೦೧.೦೦ |
| ೮೭೮. | ಶ್ರೀಮತಿ ಫರಿದಾ ಭಾನು<br>ಸಹ ಶಿಕ್ಷಕರು | ೧,೦೦೧.೦೦ |
| ೮೭೯. | ಶ್ರೀ ಮೃತ್ಯುಂಜಯಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೮೮೦. | ಶ್ರೀ ಜಿ.ಕೆ. ನಾಗರಾಜು<br>ಸಹ ಶಿಕ್ಷಕರು | ೧,೦೦೧.೦೦ |
| ೮೮೧. | ಶ್ರೀ ಬಿ.ಎಸ್. ಚಂದ್ರಶೇಖರಯ್ಯ<br>ಪ್ರಥಮದರ್ಜೆ ಸಹಾಯಕರು | ೧,೦೦೧.೦೦ |
| | ಕ್ರ.ಸಂ. ೮೭೩ ರಿಂದ ೮೮೧ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಹೆಡಕನಹಳ್ಳಿ, ಹೊಸಕೋಟೆ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ. | |
| ೮೮೨. | ಶ್ರೀ ಎಂ. ಈಶ್ವರಪ್ಪ<br>ಶಿಕ್ಷಕರು | ೧,೦೦೧.೦೦ |
| ೮೮೩.. | ಶ್ರೀ ಚಂದ್ರಶೇಖರಯ್ಯ<br>ಶಿಕ್ಷಕರು | ೧,೦೦೧.೦೦ |
| ೮೮೪. | ಶ್ರೀ ಪಿ.ಎಸ್. ಸಿದ್ಧಗಂಗಯ್ಯ<br>ಶಿಕ್ಷಕರು | ೧,೦೦೧.೦೦ |
| ೮೮೫. | ಶ್ರೀ ಕೆ.ವಿ. ನಾಗಲಿಂಗಯ್ಯ<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೮೮೬. | ಶ್ರೀ ಆರ್.ಜಿ. ರೇಣುಕಾರಾಧ್ಯ<br>'ಡಿ' ಗ್ರೂಫ್ ನೌಕರರು | ೧,೦೦೧.೦೦ |
| | ಕ್ರ.ಸಂ. ೮೮೨ ರಿಂದ ೮೮೬ರ ವಿಳಾಸಗಳು<br>ಕನ್ನಡ ಪಂಡಿತ ವಿಭಾಗ, ಶ್ರೀ ಸಿದ್ಧಗಂಗಾಮಠ. | |
| ೮೮೭. | ಶ್ರೀ ಡಿ. ಬಸವರಾಜು<br>ಸಹ ಪ್ರಾಧ್ಯಾಪಕರು | ೧,೦೦೧.೦೦ |
| ೮೮೮. | ಶ್ರೀ ಡಿ.ಎಸ್. ಚಂದ್ರಶೇಖರಯ್ಯ<br>ಸಹ ಪ್ರಾಧ್ಯಾಪಕರು | ೧,೦೦೧.೦೦ |
| ೮೮೯. | ಶ್ರೀ ಶ್ರೀಧರಶಾಸ್ತ್ರಿ<br>ಪ್ರಾಧ್ಯಾಪಕರು | ೧,೦೦೧.೦೦ |
| ೮೯೦. | ಶ್ರೀ ಆರ್. ರಾಮಚಂದ್ರರಾವ್<br>ಪ್ರಾಧ್ಯಾಪಕರು | ೧,೦೦೧.೦೦ |
| ೮೯೧. | ಶ್ರೀ ಶಿವಲಿಂಗಸ್ವಾಮಿಗಳು<br>ಪ್ರಾಧ್ಯಾಪಕರು | ೧,೦೦೧.೦೦ |
| ೮೯೨. | ಶ್ರೀ ಷಡಕ್ಷರಯ್ಯ<br>ಸಹ ಪ್ರಾಧ್ಯಾಪಕರು | ೧,೦೦೧.೦೦ |
| ೮೯೩. | ಶ್ರೀ ಗಣಪತಿ ಅನಂತಭಟ್<br>ಉಪನ್ಯಾಸಕರು | ೧,೦೦೧.೦೦ |
| ೮೯೪. | ಶ್ರೀ ಸೋ. ನರಸಿಂಹ<br>ಉಪನ್ಯಾಸಕರು | ೧,೦೦೧.೦೦ |
| | ಕ್ರ.ಸಂ. ೮೮೨ ರಿಂದ ೮೯೪ರ ವಿಳಾಸಗಳು<br>ಶ್ರೀ ಸಿದ್ಧಲಿಂಗೇಶ್ವರ ವೇದ ಸಂಸ್ಕೃತ ಮಹಾಪಾಠಶಾಲೆ,<br>ಶ್ರೀ ಸಿದ್ಧಗಂಗಾಮಠ, ತುಮಕೂರು–೪. | |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೮೯೫. | ಶ್ರೀ ಬಸವರಾಜು<br>ಸಹ ಪ್ರಾಧ್ಯಾಪಕರು | ೧,೦೦೧.೦೦ |
| ೮೯೬. | ಶ್ರೀ ಜಿ.ಸಿ. ರಾಜಶೇಖರಯ್ಯ<br>ಸಹ ಪ್ರಾಧ್ಯಾಪಕರು | ೧,೦೦೧.೦೦ |
| ೮೯೭. | ಶ್ರೀ ಆರ್. ಶಾಂತಕುಮಾರ್<br>ಸಹ ಪ್ರಾಧ್ಯಾಪಕರು | ೧,೦೦೧.೦೦ |
| ೮೯೮. | ಶ್ರೀಮತಿ ಲಲಿತಮ್ಮ<br>ಸಹ ಶಿಕ್ಷಕರು | ೧,೦೦೧.೦೦ |
| ೮೯೯. | ಶ್ರೀ ಡಿ.ಎಂ. ಮಲ್ಲಿಕಾರ್ಜುನಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೦೦. | ಶ್ರೀ ಬಿ. ಶಿವಶಂಕರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೦೧. | ಶ್ರೀ ಹೆಚ್.ಎ. ಕುಮಾರ್<br>ಸಹ ಶಿಕ್ಷಕರು | ೧,೦೦೧.೦೦ |
| ೯೦೨. | ಶ್ರೀ ಈಶ್ವರಪ್ಪ ಮಾಯಕರ್<br>ಸಹ ಶಿಕ್ಷಕರು | ೧,೦೦೧.೦೦ |
| ೯೦೩. | ಶ್ರೀ ಎಸ್.ಎಸ್. ನಿರಂಜನಮೂರ್ತಿ<br>ಸಹ ಶಿಕ್ಷಕರು | ೧,೦೦೧.೦೦ |
| ೯೦೪. | ಶ್ರೀ ಜಿ.ವಿ. ಮನೋಹರ<br>ಸಹ ಶಿಕ್ಷಕರು | ೧,೦೦೧.೦೦ |
| ೯೦೫. | ಶ್ರೀಮತಿ ಶೋಭಾ<br>ಸಹ ಶಿಕ್ಷಕರು | ೧,೦೦೧.೦೦ |
| ೯೦೬. | ಶ್ರೀ ಕೆ.ಎಸ್. ತೋಂಟರಾಧ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೯೦೭. | ಶ್ರೀ ಸಿ. ಅಶ್ವತ್ಥಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೯೦೮. | ಶ್ರೀ ರಾಮಕೃಷ್ಣ<br>ಸಹ ಶಿಕ್ಷಕರು | ೧,೦೦೧.೦೦ |
| ೯೦೯. | ಶ್ರೀ ಎಲ್. ಶಿವಕುಮಾರ್<br>ಸಹ ಶಿಕ್ಷಕರು | ೧,೦೦೧.೦೦ |
| ೯೧೦. | ಶ್ರೀ ಎಲ್.ಎ. ಶಿವಣ್ಣ<br>ಸಹ ಶಿಕ್ಷಕರು | ೧,೦೦೧.೦೦ |
| ೯೧೧. | ಶ್ರೀ ಎಸ್. ರುದ್ರಮೂರ್ತಿ<br>ಪ್ರಥಮ ದರ್ಜೆ ಸಹಾಯಕರು | ೧,೦೦೧.೦೦ |
| ೯೧೨. | ಶ್ರೀ ರುದ್ರೇಶಯ್ಯ<br>'ಡಿ' ದರ್ಜೆ ನೌಕರರು | ೧,೦೦೧.೦೦ |
| ೯೧೩. | ಶ್ರೀ ಬಿ.ಜಿ. ಚನ್ನಮಲ್ಲಿಕಾರ್ಜುನ<br>ಪ್ರ.ಶಾ.ಸ. | ೧,೦೦೧.೦೦ |
| | ಕ್ರ.ಸಂ. ೮೮೫ ರಿಂದ ೯೧೩ರ ವಿಳಾಸಗಳು<br>ಶ್ರೀ ಸಿದ್ಧಲಿಂಗೇಶ್ವರ ವೇದ ಸಂಸ್ಕೃತ ಮಹಾಪಾಠಶಾಲೆ,<br>ಶ್ರೀ ಸಿದ್ಧಗಂಗಾಮಠ–೪. | |
| ೯೧೪. | ಶ್ರೀ ಎಸ್.ಸಿ. ನಂಜಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೯೧೫. | ಶ್ರೀ ಎಸ್. ಕಲ್ಲಪ್ಪ<br>ಹಿಂದಿ ಶಿಕ್ಷಕರು | ೧,೦೦೧.೦೦ |
| ೯೧೬. | ಶ್ರೀ ಟಿ. ನಾಗರಾಜು<br>ಪ್ರಾಂಶುಪಾಲರು | ೧,೦೦೧.೦೦ |
| ೯೧೭. | ಶ್ರೀಮತಿ ಬಿ.ಎಂ. ಹೇಮಲತಾ<br>ಉಪನ್ಯಾಸಕರು | ೧,೦೦೧.೦೦ |
| ೯೧೮. | ಶ್ರೀ ಎಸ್. ಮಹೇಶ್<br>ಉಪನ್ಯಾಸಕರು | ೧,೦೦೧.೦೦ |
| | ಕ್ರ.ಸಂ. ೯೧೪ ರಿಂದ ೯೧೮ರ ವಿಳಾಸಗಳು<br>ಶ್ರೀ ವಿನಾಯಕ ಸರ್ಕಾರಿ ಪದವಿ ಪೂರ್ವ ಕಾಲೇಜು,<br>ನಿಟ್ಟೂರು, ಗುಬ್ಬಿ ತಾಲ್ಲೂಕು. | |
| ೯೧೯. | ಶ್ರೀ ಮಂಜುನಾಥ್<br>ಉಪನ್ಯಾಸಕರು | ೧,೦೦೧.೦೦ |
| ೯೨೦. | ಶ್ರೀ ಕೆ.ವಿ. ರವಿ<br>ಉಪನ್ಯಾಸಕರು | ೧,೦೦೧.೦೦ |
| ೯೨೧. | ಶ್ರೀ ಹೆಚ್.ಎಂ. ಕೊಟ್ಟೂರಪ್ಪ<br>ಉಪನ್ಯಾಸಕರು | ೧,೦೦೧.೦೦ |
| ೯೨೨. | ಶ್ರೀ ಹೆಚ್.ಎಲ್. ಶಾಂತಕುಮಾರ್<br>ಉಪನ್ಯಾಸಕರು | ೧,೦೦೧.೦೦ |
| ೯೨೩. | ಶ್ರೀ ಪಿ.ಎಸ್. ಸೋಮಶೇಖರ್<br>ಉಪನ್ಯಾಸಕರು | ೧,೦೦೧.೦೦ |
| ೯೨೪. | ಶ್ರೀ ಚಿಕ್ಕಣ್ಣ<br>ಉಪನ್ಯಾಸಕರು | ೧,೦೦೧.೦೦ |
| ೯೨೫. | ಶ್ರೀ ಎ.ಜಿ. ಚಂದ್ರಶೇಖರಯ್ಯ<br>ಉಪನ್ಯಾಸಕರು | ೧,೦೦೧.೦೦ |
| ೯೨೬. | ಶ್ರೀ ಟಿ.ಎಚ್. ಮಾಗಡಿ ರಂಗಯ್ಯ<br>ಉಪನ್ಯಾಸಕರು | ೧,೦೦೧.೦೦ |
| | ಕ್ರ.ಸಂ. ೯೧೯ ರಿಂದ ೯೨೬ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಪದವಿ ಪೂರ್ವ ಕಾಲೇಜು,<br>ಗುಡೇಮಾರನಹಳ್ಳಿ, ಮಾಗಡಿ ತಾಲ್ಲೂಕು. | |
| ೯೨೭. | ಶ್ರೀ ಎಸ್.ಹೆಚ್. ಯೋಗೀಶ್<br>ಬಿನ್ ಸಿದ್ಧನಂಜಪ್ಪ<br>ನಂ. ೪೮, ೫ನೇ ಅಡ್ಡರಸ್ತೆ,<br>ಎಲ್.ಐ.ಸಿ. ಕಾಲೋನಿ, ೩ನೇ ಬ್ಲಾಕ್ ಪೂರ್ವ,<br>ಜಯನಗರ, ಬೆಂಗಳೂರು – ೧೧. | ೧,೦೦೧.೦೦ |

(ಮುಂದುವರೆಯುತ್ತದೆ)

RNI No. 17139/69 "Siddaganga" Monthly - Postal Reg. No. KA/SK/TMR/385/2003-05




ಏಪ್ರಿಲ್ ೪ರಂದು ಶ್ರೀಮಠದಲ್ಲಿ ನಡೆದ ಶ್ರೀ ಗುರುವಂದನ ಮಹೋತ್ಸವದ ಅಂಗವಾಗಿ ಏರ್ಪಡಿಸಿದ್ದ ಸಾಹಿತ್ಯ ಸಮ್ಮೇಳನದ ದಿವ್ಯಸಾನ್ನಿಧ್ಯ ವಹಿಸಿ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ : ಶ್ರೀಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಶ್ರೀ ಎಸ್. ಜಗನ್ನಾಥ್, ಪ್ರೊ. ಎನ್. ಬಸವಾರಾಧ್ಯ, ಡಾ. ಎಸ್.ಜಿ. ನಾಗಲೋಟಿಮಠ, ಶ್ರೀ ಮಲ್ಲೇಪುರಂ ಜಿ. ವೆಂಕಟೇಶ್ ಮತ್ತು ಶ್ರೀ ಸಿ. ಚನ್ನಿಗಪ್ಪ ಅವರು ಉಪಸ್ಥಿತರಿದ್ದರು.



ದೇಶಾದ್ಯಂತ ಮೇ ೯ರಂದು ನಡೆದ ನಾಲ್ಕನೇ ಸುತ್ತಿನ ಫಲ್ಸ್‌ಪೋಲಿಯೋ ಲಸಿಕೆ ನೀಡಿಕೆ ಕಾರ್ಯಕ್ರಮವನ್ನು ಶ್ರೀಮಠದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಗುವಿಗೆ ಪೋಲಿಯೋ ಹನಿ ಹಾಕುವುದರ ಮೂಲಕ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ ಡಾ. ಜೆ.ಎನ್. ರಾಜು, ಕ್ಯಾತಸಂದ್ರ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿ ಡಾ. ಅಫ್ಜಲ್ ಉರ್ ರಹಮಾನ್ ಅವರು ಉಪಸ್ಥಿತರಿದ್ದರು.